

# ಉತ್ತರ ರಾಮಾಯಣ

ದಶರಥ ಪುತ್ರನಾದ ಶ್ರೀ ರಾಮಚಂದ್ರನು ಲಂಕಾಧಿಪತಿಯಾದ ರಾವಣನೇ ಮೊದಲಾದ ರಾಕ್ಷಸರನ್ನು ಕೊಂದು, ಸೀತೆಯೊಂದಿಗೆ ಅಯೋಧ್ಯೆಗೆ ಹಿಂದಿರುಗಿದನು. ಆಗಲೇ ವನವಾಸದ ಅವಧಿ ಕೂಡಾ ಮುಗಿಯಿತು. ರಾಮನು ಪಟ್ಟಾಭಿಷಿಕ್ತನಾಗಿ ರಾಜ್ಯ ಪರಿಪಾಲನೆ ಮಾಡುತ್ತಾ ಇರುವಾಗ ಒಂದು ದಿನ ಅಗಸ್ತ್ಯನೇ ಮೊದಲಾದ ಮುನಿಗಳು ಅಯೋಧ್ಯೆಗೆ ಬಂದರು. ಅವರಲ್ಲಿ ನಾಲ್ಕು ದಿಕ್ಕುಗಳಲ್ಲಿರುವ ಬೇರೆ ಬೇರೆ ಮುನಿಗಳೂ ಇದ್ದರು. ಎಲ್ಲರೂ ರಾಮನನ್ನು ನೋಡಲು ಬಂದಿದ್ದರು.

ತನ್ನ ದರ್ಶನಕ್ಕಾಗಿ ಬಂದ ಆ ಮುನಿಗಳನ್ನು ರಾಮನು ತನ್ನ ಬಳಿಗೆ ಕರೆಯಿಸಿ, ಅರ್ಘ್ಯ ಪಾದ್ಯಗಳಿಂದ ಸತ್ಕರಿಸಿ, ಉಚಿತಾಸನಗಳಲ್ಲಿ ಕುಳ್ಳಿರಿಸಿ, ಕುಶಲ ಪ್ರಶ್ನೆಗಳಿಂದ ಯೋಗಕ್ಷೇಮ ವಿಚಾರಿಸಿ ಬಂದ ಕಾರ್ಯವೇನೆಂದು ಕೇಳಿದನು.

ಮುನಿಗಳು ರಾಮನನ್ನು ರಾಜನಾಗಿ ನೋಡುವ ಭಾಗ್ಯವು ತಮಗೆ ಬಂದುದಕ್ಕೆ ಸಂತೋಷ ವ್ಯಕ್ತಪಡಿಸಿದರು. ರಾಮನು ರಾವಣನನ್ನು ಸಂಹಾರ ಮಾಡಿದುದು ದೊಡ್ಡ ಲೆಕ್ಕಕ್ಕೆ ಬರುವಂಥಾದ್ದಲ್ಲವೆಂದೂ, ರಾಮನ ಕೈಯಲ್ಲಿ ಸತ್ತ ರಾಕ್ಷಸರೆಲ್ಲ ದೊಡ್ಡವರೇ ಆಗಿದ್ದರೂ, ಅವರೆಲ್ಲರಿಗಿಂತ ಅಜೇಯನಾದ ಇಂದ್ರಜಿತ್ತುವಿನಂತಹ ಮಹಾ ಮಾಯಾವಿಯನ್ನು ಲಕ್ಷ್ಮಣನಿಂದ ಕೊಲ್ಲಿಸಿದುದನ್ನು ಆಶ್ಚರ್ಯಕರವೆಂದೂ ವರ್ಣಿಸಿದರು.

ಮುನಿಗಳ ಮಾತುಗಳನ್ನು ಕೇಳಿ ರಾಮನಿಗೆ ಆಶ್ಚರ್ಯವಾಯಿತು. ರಾವಣ, ಕುಂಭಕರ್ಣ, ಮಹೋದರ, ಪ್ರಹಸ್ತ, ದೇವಾಂತಕ, ನರಾಂತಕರಂತಹ ರಾಕ್ಷಸ ವೀರರಿಗಿಂತಲೂ ಇಂದ್ರಜಿತ್ತು ಹೆಚ್ಚಿನ ಪರಾಕ್ರಮಶಾಲಿಯೆಂಬುದನ್ನು ಕೇಳಿ ರಾಮನಿಗೆ ಇಂದ್ರಜಿತ್ತುವಿನ ಪರಾಕ್ರಮ, ಪ್ರಭಾವಗಳನ್ನು ಇನ್ನಷ್ಟು ವಿವರವಾಗಿ ತಿಳಿಯಬೇಕೆಂಬ ಕೋರಿಕೆಯುಂಟಾಯಿತು. ಆಗ ಅಗಸ್ತ್ಯನು ರಾಮನೊಂದಿಗೆ ರಾವಣನ ವಂಶವನ್ನು ಕುರಿತು ಈ ಕೆಳಗಿನಂತೆ ವಿವರಿಸಿ ಹೇಳಲು ತೊಡಗಿದನು.

## ೧. ಪುಲಸ್ತ್ಯ ವಂಶ ವೃತ್ತಾಂತ



ಕೃತಯುಗದಲ್ಲಿ ಬ್ರಹ್ಮಮಾನಸಪುತ್ರನಾಗಿ ಎರಡನೇ ಬ್ರಹ್ಮನೆಂದು ಹೇಳಲ್ಪಡುವ ಪುಲಸ್ತ್ಯನು ಒಂದು ಕಾಲದಲ್ಲಿ ತಪಸ್ಸು ಮಾಡಬೇಕೆಂದು ಮೇರುಪರ್ವತ ಪ್ರಾಂತದಲ್ಲಿದ್ದ ತೃಣಬಿಂದುವಿನ ಆಶ್ರಮಕ್ಕೆ ಹೋದನು. ಅಲ್ಲಿ ಅವನು ತಪಸ್ಸು ಮಾಡಿಕೊಂಡಿರುವಾಗ, ದೇವ, ನಾಗ, ರಾಜರ್ಷಿಗಳ ಕನ್ಯೆಯರು ದಿನಾ ಬಂದು ತಮ್ಮ ಪದ್ಧತಿಯಂತೆ ಸ್ವೇಚ್ಛೆಯಾಗಿ ಆಟಪಾಟವಾಡುತ್ತ ಗಲಾಟೆ ಮಾಡಿಕೊಂಡಿದ್ದರು. ಆದರಿಂದ ಅವನ ತಪಸ್ಸಿಗೆ ವಿಘ್ನ ಬರಲಾರಂಭಿಸಿತು. ಮೊದಲೇನೋ ಹೀಗೆಲ್ಲಾ ಗಲಾಟೆ ಮಾಡಬಾರದೆಂದು ಬುದ್ಧಿ ಹೇಳಿ ನೋಡಿದನು, ಅವರೇನೂ ಲಕ್ಷಿಸಲಿಲ್ಲ. ಕಡೆಗೆ ಕುಪಿತನಾದ ಪುಲಸ್ತ್ಯನು ತನ್ನ ಇದಿರಿಗೆ ಬಂದ ಸ್ತ್ರೀ ಗರ್ಭವತಿಯಾಗುವಂತೆ ಶಾಪ ಕೊಟ್ಟನು.

ಈ ಶಾಪದ ಸಂಗತಿ ತೃಣಬಿಂದುವಿನ ಕುಮಾರಿಗೆ ಗೊತ್ತಿರಲಿಲ್ಲ. ಅವಳು ಎಂದಿನಂತೆ ಪುಲಸ್ತ್ಯನ ಮುಂದೆ ಬಂದು ತನ್ನ ಸ್ನೇಹಿತೆಯರನ್ನು ಕರೆಯುತ್ತ ಹುಡುಕತೊಡಗಿದಳು. ಒಬ್ಬಳೂ ಅವಳ ಕಣ್ಣಿಗೆ ಬೀಳಲಿಲ್ಲ. ಅವಳು ನೆಟ್ಟಗೆ ಪುಲಸ್ತ್ಯನು ವೇದಾಧ್ಯಯನ ಮಾಡುತ್ತಿದ್ದಲ್ಲಿಗೇ ಹೋದಳು. ಅವನ ದರ್ಶನವಾದ ಕೂಡಲೇ ಅವಳಲ್ಲಿ ಗರ್ಭ ಚಿಹ್ನೆಗಳು ಕಾಣತೊಡಗಿತು. ಅವಳ ಶರೀರವೆಲ್ಲಾ ಬಾಡಿ ಹೋಯಿತು.

ಅವಳು ತನ್ನಲ್ಲಿ ಬಂದ ಮಾರ್ಪಾಟನ್ನು ನೋಡಿ ತಂದೆಯ ಮುಂದೆ ಹೋಗಿ ಹೇಳಿಕೊಂಡಳು. "ಅಪ್ಪಾ, ನನ್ನ ಶರೀರವೆಲ್ಲಾ ಹೇಗೆ ಬದಲಾವಣೆಯಾಯಿತೋ ನೋಡು. ನನ್ನ ಸ್ನೇಹಿತೆಯರನ್ನು ಹುಡುಕುತ್ತಾ ಪುಲಸ್ತ್ಯಾಶ್ರಮಕ್ಕೆ ಹೋದೆನು. ಕೂಡಲೇ ನನ್ನ ಶರೀರ ಹೀಗಾಗಿದೆ. ಕಾರಣ ತಿಳಿಯಲಿಲ್ಲ. ಈಗ ಏನು ಮಾಡಬೇಕೆಂತಲೂ ತೋರುವುದಿಲ್ಲ. ತುಂಬಾ ಭಯವಾಗಿದೆ" ಎಂದಳು.

ಪುಲಸ್ತ್ಯನ ಶಾಪ ಫಲಿತವಾಗಿಯೇ ತನ್ನ ಮಗಳು ಗರ್ಭವತಿಯಾದಳೆಂದು ತೃಣಬಿಂದು ತಿಳಿದುಕೊಂಡು, ಅವಳನ್ನು ಕರೆದುಕೊಂಡು ಪುಲಸ್ತ್ಯನ ಬಳಿಗೆ ಹೋಗಿ, "ಮಹಾನುಭಾವಾ, ಇವಳು ನನ್ನ ಮಗಳು. ಬಹಳ ಒಳ್ಳೆಯ ಗುಣವುಳ್ಳವಳು. ನಿಮ್ಮ ಹತ್ತಿರ ಯಾವ ಶಂಟೆಗೂ ಬಂದವಳಲ್ಲ. ನಿಮ್ಮ ಮೇಲೆ ಭಕ್ತಿ ಭಾವವಿರುವವಳು. ಈಗ ನಿಮ್ಮನ್ನು ಹುಡುಕುತ್ತಾ ಬಂದಿದ್ದಾಳೆ. ನೀವು ಇವಳನ್ನು ಪತ್ನಿಯಾಗಿ ಸ್ವೀಕರಿಸಿ ಉದ್ಧರಿಸಬೇಕು. ಇವಳಿಂದ ಸೇವೆಗಳನ್ನು ಹೊಂದಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

ಪುಲಸ್ತ್ಯನು ಒಪ್ಪಿಕೊಂಡನು. ಕ್ರಮವಾಗಿ ತನ್ನ ಹೆಂಡತಿಯ ಗುಣಗಳೂ, ನಡೆನುಡಿಗಳೂ ಪುಲಸ್ತ್ಯನಿಗೆ ಸಂತೋಷವನ್ನುಂಟುಮಾಡಿದುವು. ಅವನು ಅವಳೊಂದಿಗೆ, "ನೀನು ನನಗೆ ತುಂಬ ಯೋಗ್ಯ

ಪತ್ನಿಯಾಗಿರುವಿ. ನಿನ್ನ ಗರ್ಭದಲ್ಲಿ ನನ್ನಂತಹ ಮಗನೇ ಹುಟ್ಟುತ್ತಾನೆ. ನಾನು ಮಾಡುವ ವೇದ ಪಠನವನ್ನು ಕೇಳುತ್ತಿರುವಾಗ ನೀನು ಗರ್ಭವತಿಯಾದುದರಿಂದ ನಿನ್ನ ಮಗನು ವಿಶ್ರವಸು ಎಂಬ ಹೆಸರು ಪಡೆಯುತ್ತಾನೆ. ನನ್ನ ಮಗನಾದುದರಿಂದ ಪೌಲಸ್ತ್ಯನೆಂತಲೂ ಖ್ಯಾತನಾಗುತ್ತಾನೆ. ನೀನೂ ಧನ್ಯಳಾದಂತೆ ತಿಳಿ!" ಎಂದನು.

ಹಾಗೆಯೇ ಕಾಲಾನುಕ್ರಮದಲ್ಲಿ ಅವಳ ಗರ್ಭದಲ್ಲಿ ವಿಶ್ರವನು ಹುಟ್ಟಿದನು. ಅವನು ಸತ್ಯ, ಶೀಲ, ಶೌಚ, ಶಾಂತ ಗುಣಗಳಿಂದ ಬೆಳೆದನು. ಅವನನ್ನು ಕುರಿತು ಎಲ್ಲರೂ ಪ್ರಶಂಸಿಸುವುದನ್ನು ಕೇಳಿ ಭರದ್ವಾಜ ಮಹಾಮುನಿ ತನ್ನ ಮಗಳಾದ ದೇವವರ್ಣಿಯನ್ನು ಕರೆದುಕೊಂಡು ಬಂದು ಅವನಿಗೆ ಮದುವೆ ಮಾಡಿದನು. ವಿಶ್ರವಸು ಅವಳೊಂದಿಗೆ ಗೃಹಸ್ಥಾಶ್ರಮವನ್ನು ಕಳೆಯುತ್ತಾ ಒಬ್ಬ ಮಗನಿಗೆ ತಂದೆಯಾದನು. ಆ ಸಮಯದಲ್ಲಿ ಲೋಕವೆಲ್ಲಾ ಹೊಸತಾದ ಬೆಳಕಿನಿಂದ ಪ್ರಕಾಶಿಸಿ ಬ್ರಹ್ಮನ ಕಣ್ಣು ತೆರೆಯಿಸಿತು.

ಆ ಮಗನು ಹುಟ್ಟಿದ ಕೂಡಲೇ ಬ್ರಹ್ಮನು ಸ್ವತಃ ಅಲ್ಲಿಗೆ ಬಂದು ಆ ಹುಡುಗನು ಧನಾಧಿಪತಿ ಆಗುವನೆಂದು ಹೇಳಿ, ಅವನಿಗೆ ವೈಶ್ರವಣನೆಂದು ಹೆಸರಿಟ್ಟು ಹೊರಟುಹೋದನು.

ವೈಶ್ರವಣನಿಗೆ ಚಿಕ್ಕತನದಿಂದಲೂ ತಪಸ್ಸೇ ಮುಖ್ಯವೆಂದು ತೋರಿತು. ಅಂತಲೇ ಅವನು ಗಾಢಾರಣ್ಯಕ್ಕೆ ಹೋಗಿ, ತಪಸ್ಸಿಗೆ ಪ್ರಾರಂಭಿಸಿದನು. ಕ್ರಮವಾಗಿ ಜಲಾಹಾರ, ವಾಯು ಭಕ್ಷಣಗಳಿಂದ ನಿರಾಹಾರಿಯಾಗಿ ಮೂರು ಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದನು.

ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮನು ಇಂದ್ರಾದಿ ದೇವತೆಗಳೊಂದಿಗೆ ಹೊರಟು ಅವನ ಮುಂದೆ ಪ್ರತ್ಯಕ್ಷನಾಗಿ, "ಅಪ್ಪಾ, ಇನ್ನು ತಪಸ್ಸು ಸಾಕು



ಮಾಡು. ನಿನ್ನ ತಪಸ್ಸಿಗೆ ಸಂತೋಷವಾಗಿದೆ. ಏನು ವರ ಬೇಕೆಂದು ಕೇಳಿಕೋ" ಎಂದನು.

"ತಾತಾ, ನನಗೆ ಲೋಕಪಾಲಕತ್ವವನ್ನೂ, ಧನಾಧಿಪತ್ಯವನ್ನೂ ಕೊಡಬೇಕು" ಎಂದು ವೈಶ್ರವಣನು ವರ ಕೇಳಿ ಬ್ರಹ್ಮನಿಗೂ ಇತರ ದೇವತೆಗಳಿಗೂ ತಲೆಬಾಗಿದನು.

"ನಾನು ಕೂಡಾ ಒಬ್ಬ ಲೋಕಪಾಲಕನನ್ನು ಸೃಷ್ಟಿ ಮಾಡಬೇಕೆಂಬ ಆಲೋಚನೆಯಲ್ಲೇ ಇದ್ದೇನೆ. ಇಂದ್ರ, ಯಮ, ವರುಣರೊಂದಿಗೆ ನೀನು ನಾಲ್ಕನೇ ಲೋಕಪಾಲಕನಾಗಿ, ನಿಧಿಗಳಿಗೆ ಅಧಿಪತಿಯಾಗಿರು. ಇಗೋ, ಸೂರ್ಯಪ್ರಕಾಶದೊಂದಿಗೆ ಸರಿಸಮವೆಂಬಂತೆ ಬೆಳಗುವ ಪುಷ್ಪಕವೆಂಬ ವಿಮಾನವನ್ನು ನಿನಗೆ ಕೊಡುತ್ತೇನೆ. ಇದು ಇನ್ನು ನಿನ್ನದೇ ಸ್ವಂತವಾಗಿದೆ. ನೀನು ಇದರಲ್ಲಿ ಏರಿ ತಿರುಗುತ್ತ ದೇವತೆಗಳೊಂದಿಗೆ ಸಮಾನನಾಗಿರುವಿ" ಎಂದು ಹೇಳಿ ಬ್ರಹ್ಮನು ಮಾಯವಾದನು.

ಹೀಗೆ ವೈಶ್ರವಣನು ಬ್ರಹ್ಮನಿಂದ ವರವನ್ನು ಪಡೆದು, ತನ್ನ ತಂದೆಯ ಆಶ್ರಮಕ್ಕೆ ಬಂದು, "ಅಪ್ಪಾ, ಬ್ರಹ್ಮನು ನನಗೆ ವರಗಳನ್ನೇನೋ ಕೊಟ್ಟನು. ಆದರೆ ನನಗೆ ವಾಸಮಾಡಲು ತಕ್ಕ ಜಾಗವನ್ನು ತೋರಿಸಲಿಲ್ಲ. ಅದನ್ನು ಕೂಡಾ ಬ್ರಹ್ಮನನ್ನು ಕೇಳುವುದು ಒಳ್ಳೆಯದಲ್ಲವೆಂದು ಸುಮ್ಮನಿದ್ದೆ. ಇತರರಿಗೆ ತೊಂದರೆಯಾಗದಂತೆ ನಾನು ವಾಸಮಾಡಲು ತಕ್ಕ ಸ್ಥಳವನ್ನು ನೀವು ತೋರಿಸ ಬೇಕು" ಎಂದನು.

ಮಗನು ಹೇಳಿದ ಮಾತು ಕೇಳಿ ವಿಶ್ರವಸು ಬಹಳ ಸಂತೋಷಪಟ್ಟು, "ಕಂದಾ, ದಕ್ಷಿಣ ಸಮುದ್ರ ತೀರದಲ್ಲಿ ತ್ರಿಕೂಟ ಪರ್ವತ ಶಿಖರದ ಮೇಲೆ ವಿಶ್ವಕರ್ಮನು ದೇವೇಂದ್ರನ ಅಮರಾವತಿ ಯನ್ನು ಹೋಲುವ ನಗರವನ್ನು ನಿರ್ಮಿಸಿದ್ದಾನೆ. ಅದಕ್ಕೆ ಲಂಕೆ ಎಂದು ಹೆಸರು. ಅತ್ಯಂತ ಸುಂದರ ವಾದ ಪಟ್ಟಣವದು. ಸುವರ್ಣ ಪ್ರಾಕಾರಗಳಿಂದ, ವಜ್ರಖಚಿತ ದ್ವಾರಗಳಿಂದ, ವೈಡೂರ್ಯಗಳಿಂದ ಅಲಂಕರಿಸಲ್ಪಟ್ಟ ತೋರಣಗಳಿಂದ ಎದ್ದು ಕಾಣುವ ನಗರವದು. ಅದು ಮೊದಲು ರಾಕ್ಷಸರಿಗಾಗಿಯೇ ನಿರ್ಮಿಸಲ್ಪಟ್ಟಿತ್ತು. ಆದರೆ ರಾಕ್ಷಸರು ತಮ್ಮ ಹೊಲ್ಲದ ಕಾರ್ಯಗಳಿಂದ ವಿಷ್ಣುಮೂರ್ತಿಯ ಕೋಪಕ್ಕೆ ಗುರಿಯಾದರು, ಕಡೆಗೆ ವಿಷ್ಣುಮೂರ್ತಿಗೆ ಹೆದರಿ ರಾಕ್ಷಸರು ಆ ಪಟ್ಟಣವನ್ನು ಬಿಟ್ಟು ಪಾತಾಳಕ್ಕೆ ಹೊರಟುಹೋದರು. ಈಗ ಅದು ಜನಶೂನ್ಯವಾಗಿದೆ. ರಾಜನೂ ಅಲ್ಲಿಲ್ಲ. ಅಲ್ಲಿ ನೀನು ನಿನ್ನ ನಿವಾಸವನ್ನು ಏರ್ಪಡಿಸಿಕೊಂಡರೆ ಯಾರಿಗೂ ತೊಂದರೆಯಾಗದು" ಎಂದನು.

ವೈಶ್ರವಣನು ತಂದೆಯ ಸಲಹೆಯ ಪ್ರಕಾರ ಅನೇಕ ಸಾವಿರಮಂದಿ ನೈಋತುಗಳೊಂದಿಗೆ ಲಂಕಾ ನಗರಕ್ಕೆ ಹೋಗಿ ನಿವಾಸವನ್ನು ಏರ್ಪಡಿಸಿಕೊಂಡು ರಾಜನಾಗಿ ಸುಖವಾಗಿ ಆ ರಾಜ್ಯವನ್ನು ಪಾಲಿಸು ತ್ತಿದ್ದನು. ಆಗಾಗ ಪುಷ್ಪಕ ವಿಮಾನದಲ್ಲಿ ಬಂದು ತನ್ನ ತಂದೆ ತಾಯಿಯರನ್ನು ನೋಡಿ ಮಾತಾಡಿಸಿ ಹೋಗುತ್ತಾ ಇದ್ದನು.



ಇಷ್ಟನ್ನೆಲ್ಲಾ ಕೇಳಿ ರಾಮನು ಆಶ್ಚರ್ಯಪಡುತ್ತಾ, ಅಗಸ್ತ್ಯನನ್ನು ನೋಡಿ, "ಮಹಾತ್ಮಾ, ರಾಕ್ಷಸರು ಪುಲಸ್ತ್ಯ ವಂಶದಲ್ಲೇ ಹುಟ್ಟಿದವರೆಂದು ಕೇಳಿದ್ದೇನೆ. ಆದರೆ ಅವಕ್ಕೆ ಮೊದಲು ಕೂಡಾ ರಾಕ್ಷಸರು ಇದ್ದರೆಂದು ನೀವು ಹೇಳುತ್ತೀರಿ, ಹಾಗಾದರೆ ಈ ರಾಕ್ಷಸರ ಮೂಲಪುರುಷನು ಯಾರೋ ಬೇರೊಬ್ಬನಿರಬೇಕಷ್ಟೆ? ಅವನು ಯಾರು ? ಅದನ್ನೂ ತಿಳಿಯಬೇಕೆಂದಿದ್ದೇನೆ" ಎಂದು ಕೇಳಿದನು.

ಅಗಸ್ತ್ಯನು ಹೀಗೆಂದನು.

ಕಮಲದಲ್ಲಿ ಹುಟ್ಟಿದ ಬ್ರಹ್ಮನು ನೀರನ್ನು ಸೃಷ್ಟಿಸಿ ಅದನ್ನು ಕಾಪಾಡಲಿಕ್ಕೆ ಕೆಲವು ಪ್ರಾಣಿಗಳನ್ನೂ ಸೃಷ್ಟಿಸಿದನು. ಆ ಪ್ರಾಣಿಗಳು ಹಸಿವಿನಿಂದಲೂ, ಭಯದಿಂದಲೂ "ನಾವೇನು ಮಾಡಬೇಕು ?" ಎಂದು ಬ್ರಹ್ಮನನ್ನು ಕೇಳಲು, ಬ್ರಹ್ಮನು ನಗಾಡುತ್ತ ತಲೆಯಾಡಿಸಿ, "ಈ ಜಲವನ್ನು ರಕ್ಷಿಸಲಿಕ್ಕೆ ಪ್ರಯತ್ನ ಮಾಡಿರಿ" ಎಂದನು. ಕೆಲವು ಪ್ರಾಣಿಗಳು "ಜಕ್ಷಿಸುತ್ತೇವೆ" ಎಂದುವು. ಮತ್ತೆ ಕೆಲವು "ರಕ್ಷಿಸುತ್ತೇವೆ" ಎಂದುವು. ರಕ್ಷಿಸುತ್ತೇವೆ ಎಂದ ಪ್ರಾಣಿಗಳು ರಾಕ್ಷಸರಾದರು. ಜಕ್ಷಿಸುತ್ತೇವೆ ಎಂದ ಪ್ರಾಣಿಗಳು ಯಕ್ಷರಾದರು. (ಜಕ್ಷಿಸುವುದು ಅಂದರೆ ಭಕ್ಷಿಸುವುದು ಎಂದು ಅರ್ಥ.) ಹೀಗೆ ಎರಡು ಬಗೆಯ ಪ್ರಾಣಿಗಳು ಮೊತ್ತಮೊದಲೇ ಏರ್ಪಟ್ಟುವು.

ರಾಕ್ಷಸರಲ್ಲಿ ಹೇತಿ, ಪ್ರಹೇತಿ ಎಂಬ ಇಬ್ಬರು ಅಣ್ಣ ತಮ್ಮಂದಿರಿದ್ದರು. ಅವರಲ್ಲಿ ಪ್ರಹೇತಿ ತಪಸ್ಸು ಮಾಡಲು ಹೊರಟುಹೋದನು.

ಹೇತಿ ಎಂಬವನು ಮಾತ್ರ ಮದುವೆ ಮಾಡಿಕೊಳ್ಳುವ ಬಯಕೆಯಿಂದ ಹೆಂಡತಿಯನ್ನು ಹುಡುಕುತ್ತ, ಕಡಗೆ ಯಮನ ತಂಗಿ ಭಯಾ ಎಂಬ ಹೆಸರಿನ ಭಯಂಕರ ರೂಪದವಳನ್ನು ನೋಡಿ ಮೆಚ್ಚಿ ಮದುವೆ ಮಾಡಿಕೊಂಡನು. ಅವಳು ಅವನಿಗೆ ತಕ್ಕ ಹೆಂಡತಿಯೇ ಆದಳು.

ಅವರಿಗೆ ವಿದ್ಯುತ್ಕೇತು ಎಂಬ ಮಗನು ಹುಟ್ಟಿ ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಬೆಳೆಯ





ತೊಡಗಿದನು. ಹಾಗೆಯೇ ಅವನಿಗೆ ಯೌವನವು ಬಂದಿತು. ಆಗ ಅವನ ತಂದೆಯಾದ ಹೇತಿ ಅವನಿಗೆ ಒಬ್ಬಳು ಹೆಂಡತಿಯನ್ನು ನಿಶ್ಚಯ ಮಾಡಿದನು. ಆ ಹುಡುಗಿ ಸಂಧ್ಯಾ ಎಂಬವಳ ಮಗಳು. ಸಾಲ ಕಟಂಕಟೆ ಎಂದು ಅವಳ ಹೆಸರು.

ಸಾಲಕಟಂಕಟೆ ವಿದ್ಯುತ್ಕೇತುವನ್ನು ಮದುವೆಯಾಗಿ, ಗಂಡನೊಂದಿಗೆ ವನಾಂತರಗಳಲ್ಲಿ ವಿಹರಿಸುತ್ತ ಗರ್ಭಿಣಿಯಾಗಿ ಮಂದರ ಪರ್ವತ ಪ್ರಾಂತದಲ್ಲಿ ಒಬ್ಬ ಮಗನನ್ನು ಹಡೆದಳು. ಆದರೆ ಅವಳಿಗೆ ಮಗುವಿನ ಪೋಷಣೆಯ ಭಾರ ತನಗೆ ಬೇಡವೆನಿಸಿತು. ಮಗುವಿನ ಮೇಲಿನ ಅಕ್ಕರೆಗಿಂತಲೂ ಗಂಡನೊಂದಿಗೆ ವಿಹರಿಸುವುದರಲ್ಲಿಯೇ ಆಸಕ್ತಿ ಹೆಚ್ಚಾಗಿದ್ದುದರಿಂದ, ಮಗನನ್ನು ಹೆತ್ತ ಜಾಗದಲ್ಲೇ ಬಿಟ್ಟು, ಗಂಡನೊಂದಿಗೆ ವಿಹರಿಸಿಕೊಂಡು ಹೋದಳು.

ಆ ಮಗು ಬಾಯಿಯೊಳಗೆ ಬೆರಳು ಹಾಕಿಕೊಂಡು ಸಣ್ಣ ದನಿಯಿಂದ ಅಳುತ್ತಿದ್ದಿತು. ಆ ಸಮಯದಲ್ಲಿ ವೃಷಭವಾಹನದ ಮೇಲೆ ಪಾರ್ವತೀ ಪರಮೇಶ್ವರರು ಆಕಾಶಮಾರ್ಗದಲ್ಲಿ ಹೋಗುತ್ತಾ ಆ ಹಸುಕಂದನ ಅಳುವನ್ನು ಕೇಳಿದರು. ಆ ದಂಪತಿಗಳು ಆ ಶಿಶುವಿನ ಮೇಲೆ ಕನಿಕರಪಟ್ಟು, ಹತ್ತಿರ ಬಂದು ನೋಡಿದರು.

ಪಾರ್ವತಿಯು ಸಂತೃಪ್ತಿಗಾಗಿ ಶಿವನು ಆ ಶಿಶುವಿಗೆ ತಾಯಿಗೆ ಸಮಾನವಾದ ವಯಸ್ಸನ್ನು ಕೊಟ್ಟು, ಚಿರಂಜೀವಿತ್ವವನ್ನೂ, ಆಕಾಶದಲ್ಲಿ ಹಾರುವಂತಹ ಒಂದು ಪಟ್ಟಣವನ್ನೂ ಕೊಟ್ಟನು. ಅಷ್ಟೇ ಅಲ್ಲದೆ ಪಾರ್ವತೀದೇವಿ ಕೂಡ ರಾಕ್ಷಸರಿಗೆ, ಗರ್ಭವಾದ ಕೂಡಲೇ ಮಗು ಹುಟ್ಟಿ, ಹುಟ್ಟಿದ ಕೂಡಲೇ ತಾಯಿಯ ವಯಸ್ಸು ಬರುವಂತೆ ವರ ಕೊಟ್ಟಳು. ಹೀಗೆ ರಾಕ್ಷಸರು ಮಕ್ಕಳ ಬಂಧಪಾಶಗಳಿಂದ ಮುಕ್ತರಾದರು.

ಪಾರ್ವತೀ ಪರಮೇಶ್ವರರಿಂದ ವರ ಪಡೆದ ಸುಕೇತು ಎಂಬ ಆ ರಾಕ್ಷಸನು, ಐಶ್ವರ್ಯವಂತನಾಗಿ ಆಕಾಶ ಗಮನದ ಪಟ್ಟಣದಲ್ಲಿ ವಿಹರಿಸುತ್ತಾ ಇಂದ್ರನಿಗೆ ಸಮಾನನಾಗಿದ್ದನು. ಆದರೆ ಅವನಲ್ಲಿ ಗರ್ವವೇನೂ ಇರಲಿಲ್ಲ. ತನ್ನ ಪಾಡಿಗೆ ತಾನಿದ್ದನು.

ಹಾಗೆ ಹುಟ್ಟಿದಾಗಲೇ ವರಗಳನ್ನು ಹೊಂದಿದ ಸುಕೇತು, ಒಳ್ಳೆಯ ಧರ್ಮಾತ್ಮನಾಗಿರುವನೆಂದು ಕೇಳಿ, ಗ್ರಾಮಣಿ ಎಂಬ ಗಂಧರ್ವನು ತ್ರಿಲೋಕ ಸುಂದರಿಯಾದ ತನ್ನ ಕುಮಾರಿ ದೇವವತಿ ಎಂಬವಳನ್ನು ಕರೆದುತಂದು ಸುಕೇತುವಿಗೆ ಕೊಟ್ಟು ಮದುವೆ ಮಾಡಿದನು. ಇಬ್ಬರೂ ಪರಸ್ಪರ ಒಪ್ಪಿಕೊಂಡರು, ತನಗೆ ಆಕಾಶ ಗಮನದಂತಹ ಅದ್ಭುತ ಶಕ್ತಿಯ ಗಂಡನು ದೊರತನೆಂದು ದೇವವತಿಗೆ ಬಹಳ ಸಂತೋಷವಾಯಿತು.

ಈ ದಂಪತಿಗಳಿಗೆ ಮಾಲ್ಯವಂತ, ಸುಮಾಲಿ, ಮಾಲಿ ಎಂಬ ಮೂವರು ಕುಮಾರರು ಮೂರು ಅಗ್ನಿಗಳಂಥವರು ಹುಟ್ಟಿದರು. ಅವರಿಗೆ ಅಪಾರ

ವಾದ ಬಲವಿದ್ದಿತು. ಭಯವನ್ನೇ ಅರಿಯದವರು. ಬಹಳ ಭಯಂಕರರೂ ಹೌದು. ತಮ್ಮ ತಂದೆ ಶಿವನಿಂದ ವರಗಳನ್ನು ಪಡೆದನೆಂದು ತಿಳಿದು ಅವರು ಮೇರು ಪರ್ವತಕ್ಕೆ ಹೋಗಿ, ಕಠೋರ ನಿಯಮ ಗಳಿಂದ ಅಲ್ಲಿಯೇ ಇದ್ದು ತಪಸ್ಸು ಮಾಡ ತೊಡಗಿದರು.

ಆ ತಪಸ್ಸಿಗೆ ಮೆಚ್ಚಿ ಶಿವನು ಇಂದ್ರಾದಿ ದೇವತೆಗಳೊಂದಿಗೆ ವಿಮಾನದ ಮೇಲಿಂದ ಬಂದು, "ನಿಮ್ಮ ತಪಸ್ಸಿಗೆ ಮೆಚ್ಚಿದ್ದೇನೆ. ಏನು ವರ ಬೇಕೋ ಕೇಳಿರಿ" ಎಂದು ಅವರನ್ನು ತಪಸ್ಸಿನಿಂದ ಎಬ್ಬಿಸಿದನು.

"ದೇವಾ! ನಿನಗೆ ನಮ್ಮ ಮೇಲೆ ನಿಜಕ್ಕೂ ಅನುಗ್ರಹ ಬಂದಿದ್ದರೆ ನಮಗೆ ಯಾರಿಂದಲೂ ಸೋಲಾಗದಂತೆ, ನಮ್ಮ ಮಾತು ಕೇಳದ ನಮ್ಮ ಶತ್ರುಗಳೆಲ್ಲಾ ನಮ್ಮ ಕೈಯಲ್ಲಿ ಸತ್ತುಹೋಗು ವಂತೆ, ನಾವು ದೀರ್ಘಾಯುಷ್ಮಂತರಾಗಿ ವರ್ಧಿಸಿ ಕೊಂಡುಬರುವಂತೆ ವರ ಕೊಡಬೇಕು" ಎಂದು ಕೇಳಿದರು.

ಹಾಗೆಯೇ ಆಗಲೆಂದು ವರವಿತ್ತನು ಶಿವ.

ಇಂತಹ ವರವನ್ನು ಹೊಂದಿದ ಆ ಮೂವರು ರಾಕ್ಷಸರೂ ಮೂರು ಲೋಕಗಳನ್ನೂ ಪೀಡಿಸ ತೊಡಗಿದರು. ಶಿವನಿಂದ ವರ ಪಡೆದವರನ್ನು ಪ್ರಶ್ನಿಸಲು ಎಲ್ಲರೂ ಹೆದರಿದರು.

ದೇವತೆಗಳೂ, ಋಷಿಗಳೂ, ಸಿದ್ಧರೂ ಸಾಧ್ಯರೂ, ಚಾರಣರೂ ಮೊದಲಾದವರ ಜೀವಿತವೇ ತಾರು ಮಾರಾಗಿ ನರಕಪ್ರಾಯವಾಯಿತು. ಅವರನ್ನು ಕಾಪಾಡುವ ನಾಥರೇ ಇಲ್ಲದಂತಾಯಿತು.

ಆ ರಾಕ್ಷಸರು ವಿಶ್ವಕರ್ಮನನ್ನು ಕರೆಯಿಸಿ "ದೇವತೆಗಳಿಗೆಲ್ಲಾ ನೀನೇ ಮನೆಗಳನ್ನೂ ಮಂದಿರ ಗಳನ್ನೂ ಕಟ್ಟಿ ಕೊಟ್ಟಿರುವುದಾಗಿ ಕೇಳಿದ್ದೇವೆ. ಹಿಮಾಲಯದ ಮೇಲೆಯೋ, ಮೇರುಪರ್ವತದ



ಮೇಲೆಯೋ, ಮಂದರಗಿರಿಯ ಮೇಲೆಯೋ, ಕೈಲಾಸಕ್ಕೆ ಸರಿಸಮನಾಗುವಂತೆ ಅಂದವಾದ ಪಟ್ಟಣ ವನ್ನು ನಮಗಾಗಿ ಕಟ್ಟಿಕೊಡು" ಎಂದು ಆಜ್ಞೆ ಮಾಡಿದರು.

"ದಕ್ಷಿಣ ಸಮುದ್ರ ತೀರದಲ್ಲಿ ತ್ರಿಕೂಟ ವೆಂದೂ, ಸುವೇಲವೆಂದೂ ಎರಡು ಪರ್ವತಗಳಿವೆ. ತ್ರಿಕೂಟ ಪರ್ವತದ ನಟ್ಟನಡುವಿನ ಶಿಖರದ ಮೇಲೆ ಇಂದ್ರನ ಅಪೇಕ್ಷೆಯಂತೆ ಲಂಕಾಪಟ್ಟಣ ವನ್ನು ಕಟ್ಟಿ ಇಟ್ಟಿದ್ದೇನೆ. ಅದು ಸ್ವರ್ಗಕ್ಕೆ ಸಮಾನ ವಾಗಿಯೇ ಇದೆ. ಅದನ್ನು ಆವರಿಸಿಕೊಂಡು ಬಂಗಾರದ ಪ್ರಾಕಾರಗಳಿವೆ. ಬಾಗಿಲುಗಳೂ, ತೋರಣಗಳೂ ತುಂಬಾ ಭವ್ಯವಾಗಿವೆ. ನೀವು ನಿಮ್ಮ ರಾಕ್ಷಸರೊಂದಿಗೆ ಹೋಗಿ ಅಲ್ಲಿ ವಾಸ ವಾಗಿದ್ದರೆ, ನಿಮ್ಮನ್ನು ಅಲ್ಲಿಂದ ಹೋಗೆನ್ನು ವವರು ಯಾರೂ ಇಲ್ಲ. ನಿಮ್ಮಿಂದಾಗಿ ಆ ಪಟ್ಟಣಕ್ಕೆ ಹೊಸ ಕಳೆ ಬರುತ್ತದೆ. ನನ್ನ ಶ್ರಮವೂ ಸಾರ್ಥಕ

ವಾಗುತ್ತದೆ" ಎಂದು ವಿಶ್ವಕರ್ಮನು ಅವರಿಗೆ ತೃಪ್ತಿಯಾಗುವಂತೆ ಅವರೊಂದಿಗೆ ಹೇಳಿದನು.

ವಿಶ್ವಕರ್ಮನಿಂದ ತಿಳಿದುಬಂದ ಸಂಗತಿಯನ್ನು ಕೇಳಿ ಆ ರಾಕ್ಷಸರು ಸಂತೋಷಪಟ್ಟು, ಅನೇಕ ಸಾವಿರ ಮಂದಿ ಪರಿವಾರದೊಂದಿಗೆ ಲಂಕೆಗೆ ಹೋಗಿ ಆ ನಗರವನ್ನು ತಿರುಗಾಡಿ ನೋಡಿ ಪರಮಾನಂದಭರಿತರಾದರು.

ಅದೇ ಸಮಯದಲ್ಲಿ ನರ್ಮದೆ ಎಂಬ ಗಂಧರ್ವ ಸ್ತ್ರೀ, ಸೌಂದರ್ಯದ ರಾಶಿಗಳಂತಹ ತನ್ನ ಮೂವರು ಕುಮಾರಿಯರನ್ನು ಕರೆದುಕೊಂಡು ಬಂದು ಆ ಮೂವರಿಗೂ ಕೊಟ್ಟು ಮದುವೆ ಮಾಡಿಸಿದಳು. ಹೀಗೆ ಒಮ್ಮೆಗೇ ಆ ರಾಕ್ಷಸರಿಗೆ ಸ್ಥಳ ಮನೆಗಳೂ, ಮಡದಿಯರೂ ಸಿಕ್ಕಿದುದರಿಂದ ಮೇರೆಯಿಲ್ಲದಷ್ಟು ಸಂತೋಷಿತರಾದರು.

ದೊಡ್ಡವನಾದ ಮಾಲ್ಯವಂತನ ಹೆಂಡತಿಯು ಹೆಸರು ಸುಂದರಿ. ಅವಳ ಗರ್ಭದಲ್ಲಿ ವಜ್ರಮುಷ್ಟಿ, ವಿರೂಪಾಕ್ಷ, ದುರ್ಮುಖ, ಸುಪ್ತಘ್ನ, ಯಜ್ಞಕೋಪ, ಮತ್ತ, ಉನ್ಮತ್ತ ಎಂಬ ಏಳು ಮಂದಿ ಕುಮಾರರೂ, ಅನಲ ಎಂಬ ಮಗಳೂ ಹುಟ್ಟಿದರು. ಹುಟ್ಟಿದ ಕೂಡಲೇ ಬೆಳೆದೂ ನಿಂತರು.

ಸುಮಾಲಿಯು ಹೆಂಡತಿ ಕೇತುಮತಿ. ಸುಮಾಲಿಗೆ ಆ ಹೆಂಡತಿಯು ಮೇಲೆ ಪ್ರಾಣಕ್ಕಿಂತ ಹೆಚ್ಚಿನ ಪ್ರೀತಿ. ಕೇತುಮತಿಗೆ ಪ್ರಹಸ್ತ, ಅಕಂಪನ, ವಿಕಟ, ಕಾಲಕಾರ್ಮುಕ, ಧೂಮ್ರಾಕ್ಷ, ದಂಡ, ಸುಪಾರ್ಶ್ವ, ಸಂಹ್ರಾದಿ, ಪ್ರಘಸ, ಭಾಸಕರ್ಣ ಎಂಬ ಹೆಸರು ಪಡೆದ ಮಗಂದಿರೂ, ಪುಷ್ಪೋತ್ಕಟೆ, ಕೈಕಸಿ, ಶುಚಿಸ್ಮಿತಾ, ಕುಂಭೀನಸಿ ಎಂಬ ಹೆಸರಿನ ಕುಮಾರಿಯರೂ ಹುಟ್ಟಿದರು.

ಮಾಲಿಯು ಹೆಂಡತಿಯಲ್ಲಿ ಅನಿಲ, ಅನಲು, ಹರ, ಸಂಪಾತಿ ಎಂಬ ನಾಲ್ವರು ಕುಮಾರರು ಮಾತ್ರವೇ ಹುಟ್ಟಿದರು.

ಇವರು ನಾಲ್ವರೂ ತಮ್ಮ ಸಾಧು ಗುಣಗಳಿಂದ ಪ್ರಸಿದ್ಧರಾಗಿ ಮುಂದೆ ವಿಭೀಷಣನಿಗೆ ಮಂತ್ರಿಗಳಾಗಿದ್ದರು.

ಹೀಗೆ ಮೂವರು ರಾಕ್ಷಸರೂ ತಮ್ಮ ಮಕ್ಕಳೊಂದಿಗೂ ಸಂಸಾರದೊಂದಿಗೂ ಲಂಕೆಯಲ್ಲಿ ವಾಸಮಾಡುತ್ತಾ, ಮೂರು ಲೋಕಗಳಲ್ಲಿಯೂ ವೀರವಿಹಾರ ಮಾಡಿಕೊಂಡು, ಯಜ್ಞಯಾಗಗಳನ್ನು ಧ್ವಂಸ ಮಾಡುವುದನ್ನೇ ಮುಖ್ಯ ಧ್ಯೇಯವಾಗಿ ವರ ಪಡೆದ ಗರ್ವದಿಂದ ತಿರುಗುತ್ತಿದ್ದರು.

ಆ ಮೂವರೂ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ತಮ್ಮದೇ ಎಂಬಂತೆ ಹೆದರಿಸಿಕೊಂಡಿದ್ದರು. ಎಲ್ಲಿಯೂ ಅವರನ್ನು ಇದಿರಿಸುವವರೇ ಇರಲಿಲ್ಲ.






ತಪೋಧನರಾದ ಮಹಾಮುನಿಗಳನ್ನು ಕೂಡಿಕೊಂಡು ಬಂದ ಅಗಸ್ತ್ಯನು ರಾಮನಿಗೆ ಲಂಕಾಪುರದ ಹುಟ್ಟುಪೂರ್ವೋತ್ತರಗಳನ್ನು ಹೇಳುತ್ತಾ, ಸುಕೇತುವಿನ ಕುಮಾರರಾದ ಮಾಲ್ಯವಂತ, ಮಾಲಿ, ಸುಮಾಲಿಯರು ಲಂಕಾಪಟ್ಟಣದಲ್ಲಿರುತ್ತ, ವರಬಲದಿಂದ ಮೂರು ಲೋಕಗಳನ್ನೂ ಪೀಡಿಸಿಕೊಂಡಿರುತ್ತ, ತಮ್ಮ ತಮ್ಮ ಹೆಂಡತಿ ಮಕ್ಕಳೊಂದಿಗೆ ವೃದ್ಧಿ ಹೊಂದಿ ಇನ್ನಷ್ಟು ಭಯಂಕರರಾದರೆಂದು ವಿವರಿಸಿ, ಹೇಳುವುದನ್ನು ಮುಂದುವರಿಸಿದನು :

ರಾಕ್ಷಸರಿಂದಾಗುವ ಯಾತನೆಗಳನ್ನು ತಾಳಲಾಗದೆ ದೇವತೆಗಳೂ, ಋಷಿಗಳೂ ರಹಸ್ಯದಲ್ಲಿ ಕೂಡಿ, ಆಲೋಚನೆ ಮಾಡಿದರು. ಆಮೇಲೆ ಎಲ್ಲರೂ ಒಂದಾಗಿ ಮಹೇಶ್ವರನ ಬಳಿಗೆ ಹೋಗಿ "ಶಂಭೋ! ಜಗದ್ರಕ್ಷಕಾ! ಸುಕೇತನ ಕುಮಾರರು ಬ್ರಹ್ಮದೇವನಿಂದ ವರಗಳನ್ನು ಪಡೆದು ಗರ್ವಾತಿರೇಕದಿಂದ ವಿಪರೀತವಾಗಿ ಪ್ರವರ್ತಿಸುತ್ತಿದ್ದಾರೆ. ದೇವತೆಗಳನ್ನು ಸ್ವರ್ಗದಿಂದ ಓಡಿಸಿ ಅದನ್ನು ತಾವು ಆಕ್ರಮಿಸಿಕೊಂಡಿದ್ದಾರೆ. ಮುನಿಗಳ ಆಶ್ರಮಗಳನ್ನೂ, ಮನೆಗಳನ್ನೂ ನೆಲಮಟ್ಟ ಮಾಡುತ್ತಿದ್ದಾರೆ. ಸಾಧುಸಂತರಿಗೆ ತಾವೇ ಇಲ್ಲದಂತಾಗಿದೆ. ಬ್ರಹ್ಮ, ರುದ್ರ, ವಿಷ್ಣು, ಇಂದ್ರ, ಯಮ, ವರುಣ, ಚಂದ್ರ ಸೂರ್ಯ ಎಲ್ಲವೂ ಅವರೇ ಎಂದು ಹೇಳಿಕೊಳ್ಳುತ್ತಿದ್ದಾರೆ. ಪ್ರತಿಕ್ಷಣದಲ್ಲಿಯೂ ಯುದ್ಧ ಸನ್ನದ್ಧರಾಗಿರುವ ಆ ಮೂವರು ರಾಕ್ಷಸ ಪರಿವಾರಗಳ ಹಾವಳಿಯಿಂದ ನಮ್ಮನ್ನು ಕಾಪಾಡಬೇಕು. ನಿನ್ನನ್ನೇ ನಂಬಿದ್ದೇವೆ, ಮಹಾದೇವಾ" ಎಂದು ಭಯಪಡುತ್ತಾ ಬೇಡಿಕೊಂಡರು.

ಆದರೆ ಮಹೇಶನು ಸುಕೇತನ ಪಕ್ಷಪಾತಿಯಾಗಿದ್ದನು. ಆದುದರಿಂದ ಅವನು ದೇವತೆಗಳನ್ನು ನೋಡಿ, "ಓ ದೇವತೆಗಳೇ! ಮಹರ್ಷಿಗಳೇ! ಆ ರಾಕ್ಷಸರ ಪ್ರತಾಪಗಳು ನನಗೆ ಗೊತ್ತಿಲ್ಲದ್ದೇನಲ್ಲ. ಆದರೇನು ಮಾಡಲಿ? ನಾನು ಅವರನ್ನು ಕೊಲ್ಲಲು ಸಾಧ್ಯವಿಲ್ಲ: ಅವರ ಸಾವು ನನ್ನ ಕೈಯಲ್ಲಿ ಎಂದು

೧. ರಾವಣನ ಜನನ



ವಿಧಿ ಬರೆದಿಲ್ಲ. ನಾನು ಹೇಳುವುದನ್ನು ಕೇಳಿರಿ. ನೀವೆಲ್ಲಾ ವಿಷ್ಣುವಿನ ಹತ್ತಿರ ಹೋಗಿರಿ. ಅವನು ತಪ್ಪದೆ ಅವರನ್ನು ಸಂಹರಿಸದೆ ಬಿಡಲಾರನು. ಧರ್ಮಸಂಕಟದಂತಹ ಈ ಪರಿಸ್ಥಿತಿಯಲ್ಲಿ ನಿಮಗೆ ವಿಷ್ಣುವೇ ಗತಿ ಎಂದಷ್ಟೇ ಹೇಳಲು ನನಗೆ ಸಾಧ್ಯ. ಬೇರೆ ದಾರಿ ತೋರುವುದಿಲ್ಲ. ಅಲ್ಲಿಗೇ ಹೋಗಿರಿ" ಎಂದನು.

ದೇವತೆಗಳೂ, ಋಷಿಗಳೂ ಮಹೇಶ್ವರನಿಗೆ ಜಯಜಯವೆನ್ನುತ್ತಾ, ನಮಸ್ಕಾರಮಾಡಿ, ವೈಕುಂಠದಲ್ಲಿರುವ ವಿಷ್ಣುಮೂರ್ತಿಯ ಬಳಿಗೆ ಹೋದರು. ಮಹಾವಿಷ್ಣುವಿನ ಮುಂದೆ ಮಹೇಶ್ವರನ ಹತ್ತಿರ ಮೊರೆಯಿಟ್ಟುಕೊಂಡಂತೆಯೇ ಬೇಡಿಕೊಂಡರು. ಮುಖ್ಯವಾಗಿ ತ್ರಿಕೂಟ ಪರ್ವತದ ಮೇಲಿನ ಲಂಕಾ ಪಟ್ಟಣದಲ್ಲಿರುವ ರಾಕ್ಷಸರನ್ನು ಕೊಂದು ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡರು. "ನಿನ್ನ ಹೊರತು ಬೇರೆ ದಿಕ್ಕಿಲ್ಲ. ಮಹೇಶ್ವರನೂ ನಿನಗೇ ಶರಣಾಗುವಂತೆ ಹೇಳಿದ್ದಾನೆ" ಎಂದು ಸಾಷ್ಟಾಂಗ ನಮಸ್ಕಾರ ಮಾಡಿದರು.

ವಿಷ್ಣುಮೂರ್ತಿ ಅವರಿಗೆ ಅಭಯವಿತ್ತು, "ನನಗೆ ಸುಕೇತುವೂ ಅವನ ಮೂವರು ಮಗಂದಿರೂ ಗೊತ್ತು. ಅವರ ಪ್ರವರ್ತನೆಗಳನ್ನೂ ನೋಡುತ್ತಲಿದ್ದೇನೆ. ನನಗೂ ಅವರ ಮೇಲೆ ಕೋಪದ ಉರಿ ಏಳುತ್ತಿದೆ. ನೀವೆಲ್ಲಾ ಬಂದು ಹೇಳಿಕೊಂಡ ಮೇಲೆ ಇನ್ನು ಯೋಚನೆ ಮಾಡಲಾರೆ. ಶಿವನೂ ನನ್ನಿಷ್ಟದಂತೆ ಮಾಡಲು ಒಪ್ಪಿದ್ದಾನೆಂದಾಯಿತು. ಅವರನ್ನು ತಪ್ಪದೆ ಸಂಹರಿಸಿಬಿಡುತ್ತೇನೆ. ಇನ್ನು ಮೇಲೆ ನೀವು ಹೆದರಬೇಕಾಗಿಲ್ಲ" ಎಂದನು.

ಆ ಮಾತುಗಳನ್ನು ಕೇಳಿ ದೇವತಾದಿಗಳೆಲ್ಲಾ ಅತ್ಯಾನಂದಗೊಂಡು ವಿಷ್ಣುವನ್ನು ಸ್ತೋತ್ರ ಮಾಡುತ್ತ, ತಮ್ಮ ತಮ್ಮ ಪ್ರದೇಶಗಳಿಗೆ ಹೊರಟು ಹೋದರು.

ಈ ಸಂಗತಿ ಬೇಗದಲ್ಲೇ ಗೂಢಚಾರರ ಮೂಲಕವಾಗಿ ಲಂಕೆಗೆ ಹೋಗಿ ಮುಟ್ಟಿತು. ಅದನ್ನು ತಿಳಿದು ಮಾಲ್ಯವಂತನು ತನ್ನ ತಮ್ಮಂದಿರೊಂದಿಗೆ, "ದೇವತೆಗಳೂ ಋಷಿಗಳೂ ಸೇರಿ ನಮ್ಮನ್ನು ಕೊಲ್ಲಿಸಲು ಪರದಾಡುತ್ತಿದ್ದಾರೇನು? ಮೊದಲು ಮಹೇಶ್ವರನ ಹತ್ತಿರ ಹೋಗಿ, ಅವನ ಕಾಲಿಗೆ ಬಿದ್ದು ಅಂಗಲಾಚಿಕೊಂಡರಂತೆ. ಮಹೇಶ್ವರನು ತನ್ನಿಂದಾಗದೆಂದು ಹೇಳಿ ವಿಷ್ಣುಮೂರ್ತಿಯ ಬಳಿಗೆ ಕಳುಹಿಸದನಂತೆ, ಮಹೇಶ್ವರನ ಸಲಹೆಯ ಮೇರೆಗೆ ಅವರೆಲ್ಲ ಬಲಗೆಟ್ಟು ಬಣ್ಣಗೆಟ್ಟು ವಿಷ್ಣುವಿನ ಪಾದಗಳಿಗೆ ತಲೆತಾಗಿಸಿ ಬೇಡಿಕೊಂಡರಂತೆ! ಅವನು ನಮ್ಮೆಲ್ಲರನ್ನೂ ಕೊಲ್ಲುವುದಾಗಿ ಅವರಿಗೆ ಅಭಯಕೊಟ್ಟು ಕಳುಹಿಸಿದ್ದಾನಂತೆ. ವಿಷ್ಣುವಿಗೆ ಬೇರೆ ಕೆಲಸವಿಲ್ಲ. ಹಿರಣ್ಯಕಶಿಪುವಿನಂತಹ ಅನೇಕ ರಾಕ್ಷಸರನ್ನು ಕೊಂದಿದ್ದಾನೆ. ಆದುದರಿಂದ ನಾವು ಸುಮ್ಮನಿರಬಾರದು. ಏನು ಮಾಡಬೇಕೆಂದು ಆಲೋಚಿಸಬೇಕು. ಏಕೆಂದರೆ

ವಿಷ್ಣು ಬಹುದೊಡ್ಡ ಮಾಯಾವಿ. ಹಿರಣ್ಯಕಶಿಪುವನ್ನು ನರಸಿಂಹನಾಗಿ ಕೊಂದವನು. ಎಷ್ಟೋ ವರಗಳನ್ನು ಪಡೆದು ದಿವ್ಯಾಸ್ತ್ರಗಳಿಂದ ಯುದ್ಧ ಮಾಡುವ, ಮಾಯಾ ವಿದ್ಯೆಗಳಲ್ಲಿ ಪಾರಂಗತರಾದ ರಾಕ್ಷಸರನ್ನು ಕೊಂದಿದ್ದಾನೆ ವಿಷ್ಣು. ವಿಷ್ಣುವಿನ ಹತ್ತಿರ ಯುದ್ಧ ಮಾಡಿ ಗೆದ್ದ ರಾಕ್ಷಸನೊಬ್ಬನೂ ಇಲ್ಲ. ಇದನ್ನೆಲ್ಲ ನೆನಪಿಟ್ಟುಕೊಂಡು ಆಲೋಚಿಸಬೇಕಾಗಿದೆ" ಎಂದನು.

ಮಾಲಿಯೂ, ಸುಮಾಲಿಯೂ ಹೀಗೆಂದು ಉತ್ತರ ಕೊಟ್ಟರು:

"ನಾವೇನೂ ತಿಳಿಯದವರಲ್ಲ, ಪಂಡಿತರಾಗಿದ್ದೇವೆ. ಯಜ್ಞಗಳನ್ನೂ ದಾನಧರ್ಮಗಳನ್ನೂ ಮಾಡುತ್ತಿದ್ದೇವೆ. ನಮಗೆ ಅಂತ್ಯವಿಲ್ಲದಷ್ಟು ಐಶ್ವರ್ಯವಿದೆ. ಅತ್ಯಂತ ಬಲಿಷ್ಠರಾದ ಶತ್ರುಗಳನ್ನೆಲ್ಲ ಲೀಲಾಜಾಲವಾಗಿ ಜಯಿಸಿದ್ದೇವೆ. ವಿಷ್ಣುಮೂರ್ತಿಯಾಗಲೀ, ರುದ್ರನೇ ಆಗಲೀ, ಇಂದ್ರನೇ ಆಗಲೀ ನಮ್ಮನ್ನೇನು ಮಾಡಲೂ ಸಾಧ್ಯವಿಲ್ಲ. ಎಲ್ಲಾ ಲೋಕಗಳೂ ನಮಗೆ ಹೆದರಿಕೊಂಡಿವೆ. ವಿಷ್ಣು ನಮ್ಮನ್ನು ದ್ವೇಷಿಸಲಿಕ್ಕೆ ಯಾವ ಕಾರಣವೂ ಇಲ್ಲ. ಈ ದೇವತೆಗಳೇ ಇಲ್ಲದ ಚಾಡಿ ಹೇಳಿ ಆತನನ್ನು ಉದ್ರೇಕಿಸಿರಬೇಕು. ಆದ್ದರಿಂದ ನಾವು ನಮ್ಮ ಸೈನ್ಯಗಳೊದಿಗೆ ಹೋಗಿ ಆ ದೇವತೆಗಳ ಸಮಾಚಾರ ತೆಗೆದುಕೊಳ್ಳಬೇಕು. ಅವರು ತಲೆಯೆತ್ತಿ ತಿರುಗದ ಹಾಗೆ ಮಾಡಿಬಿಡಬೇಕು. ಅವರ ದೂರು ಇಲ್ಲದಿದ್ದರೆ ವಿಷ್ಣು ಕ್ಷೀರ ಸಾಗರದಲ್ಲಿ ಸುಮ್ಮನೆ ಮಲಗಿಕೊಂಡೇ ಇರುತ್ತಾನೆ. ಅವನ ಬಳಿಗೆ ಯಾರೂ ಹೋಗದಂತೆ ಮಾಡಿದರಾಯಿತು."

ಹೀಗೆ ಆಲೋಚನೆ ಮಾಡಿಕೊಂಡು ಆ ರಾಕ್ಷಸ ಸಹೋದರರು ದೊಡ್ಡ ಯುದ್ಧಕ್ಕೆ ಬೇಕಾದ ಪ್ರಯತ್ನಗಳನ್ನು ಮಾಡಿ, ದೊಡ್ಡ ರಾಕ್ಷಸ ಸೈನ್ಯದೊಂದಿಗೆ ಸ್ವರ್ಗಲೋಕಕ್ಕೆ ಹೊರಟರು. ಲಂಕೆಯಿಂದ ರಥಗಳೂ, ಆನೆ, ಕುದುರೆಗಳೂ, ಒಂಟೆಗಳೂ ಮುಂತಾದ ವಾಹನಗಳಲ್ಲಿ ತಮ್ಮ ಸಾಮಾನುಗಳನ್ನು ಹೇರಿಸಿಕೊಂಡು ಹೊರಟರು. ಮಾಲಿಯೇ ಅಪಾರವಾದ ಆ ರಾಕ್ಷಸ ಸೇನೆಗೆ ನಾಯಕನಾಗಿದ್ದನು. ಲಂಕೆಯಲ್ಲಿದ್ದ ಸಮಸ್ತ ರಾಕ್ಷಸರೂ ಹಾಗೆ ಒಮ್ಮೆಗೇ ಹೊರಟು ಹೋದುದರಿಂದ ಲಂಕೆ ಪಾಳು ಬಿದ್ದ ಪಟ್ಟಣದಂತೆ ಕಾಣುತ್ತಿತ್ತು. ಲೋಕದವರೆಲ್ಲ ಆ ವಿಚಿತ್ರವನ್ನು ಆಶ್ಚರ್ಯದಿಂದ ನೋಡಿದರು.



ರಾಕ್ಷಸರು ಬಹು ದೊಡ್ಡ ಯುದ್ಧಕ್ಕೆ ಹೊರಟ ಸಂಗತಿ ತಿಳಿದ ಕೂಡಲೇ ವಿಷ್ಣುಮೂರ್ತಿ ಧಗಧಗನೆ ಹೊಳೆಯುವ ಕವಚವನ್ನು ಧರಿಸಿಕೊಂಡು ಬಿಲ್ಲು, ಬಾಣ, ಶಂಖ, ಚಕ್ರ, ಗದೆ, ಖಡ್ಗಗಳನ್ನು ಎತ್ತಿಕೊಂಡು, ಪೀತಾಂಬರಧಾರಿಯಾಗಿ ಗರುಡವಾಹನದಲ್ಲಿ ಬಂದು ದೇವತೆಗಳ ಸೇನೆಗಳೊಂದಿಗೆ ಸೇರಿದನು. ಹೀಗಾಗುವುದೆಂದು ರಾಕ್ಷಸರು ಇದಿರು ನೋಡಿರಲಿಲ್ಲ. ಹಿಂಜರಿಯಲೂ ಸಾಧ್ಯವಿಲ್ಲದ




ಪರಿಸ್ಥಿತಿ. ಉಭಯ ಪಕ್ಷಗಳಿಗೂ ಯುದ್ಧವು ಪ್ರಾರಂಭವಾಯಿತು. ಘನ ಘೋರ ಯುದ್ಧವದು.

ವಿಷ್ಣುಮೂರ್ತಿ ತನ್ನ ಬಾಣಗಳಿಂದ, ಚಕ್ರಾಯುಧದಿಂದ, ಗದಾಘಾತದಿಂದ ಅನೇಕ ಮಂದಿ ರಾಕ್ಷಸರನ್ನು ಕೊಂದನು. ಆಗ ಮಾಲಿ ವಿಷ್ಣುಮೂರ್ತಿಯನ್ನೆದುರಿಸಿ ಅತಿದಾರುಣವಾದ ಯುದ್ಧ ಮಾಡುತ್ತ, ವಿಷ್ಣುವಿನ ವಾಹನವಾದ ಗರುತ್ಮಂತನ ತಲೆಯ ಮೇಲೆ ಬಲವಾಗಿ ಹೊಡೆಯಲು ಗರುತ್ಮಂತನು ಯುದ್ಧರಂಗದಿಂದ ಓಡಿ ಹೋದನು. ಆದರೆ ಮತ್ತೆ ಸುಧಾರಿಸಿಕೊಂಡು ವಿಷ್ಣುವಿನೊಂದಿಗೆ ಮತ್ತೆ ಯುದ್ಧರಂಗಕ್ಕೆ ಬಂದನು. ಈ ಸಾರಿ ವಿಷ್ಣುವಿನ ಚಕ್ರಾಯುಧವು ಮಾಲಿಯ ತಲೆಯನ್ನು ಕತ್ತರಿಸಿ ಹಾಕಿತು.

ಮಾಲಿ ಸತ್ತು ಬಿದ್ದುದನ್ನು ನೋಡಿ ಮಾಲ್ಯವಂತ, ಸುಮಾಲಿಯರು ತೀರಾ ನಿರಾಶರಾಗಿ ಉಳಿದ ರಾಕ್ಷಸ ಬಳಗದೊಂದಿಗೆ ಲಂಕೆಯ ಕಡೆಗೆ ಓಡತೊಡಗಿದರು. ವಿಷ್ಣು ಅವರನ್ನು ವಧಿಸುತ್ತ ಬೆನ್ನಟ್ಟಿಕೊಂಡೇ ಹೋದನು.

ಅದನ್ನು ನೋಡಿ ಮಾಲ್ಯವಂತನು, "ಹೇ, ವಿಷ್ಣೂ! ನೀನು ಕ್ಷತ್ರಿಯ ಧರ್ಮವನ್ನು ಕೂಡಾ ಪಾಲಿಸದೆ ಓಡಿ ಹೋಗುತ್ತಿರುವ ನಮ್ಮನ್ನು ಅಟ್ಟಿಸಿ ಕೊಲ್ಲುವುದರಲ್ಲಿ ಯಾವ ನ್ಯಾಯವಿದೆ? ಅಂಥವನಿಗೆ ವೀರಸ್ವರ್ಗವೂ ಬಾರದು. ನಿನಗೆ ಹಾಗೆ ಯುದ್ಧ ಮಾಡಬೇಕೆಂದಿದ್ದರೆ ನನ್ನೊಂದಿಗೆ ಯುದ್ಧ ಮಾಡು. ಸಿಕ್ಕವರನ್ನೆಲ್ಲ ಕೊಲ್ಲಬೇಡ. ಧೈರ್ಯವಿದ್ದರೆ ಬಾ ನನ್ನ ಮುಂದೆ!" ಎನ್ನುತ್ತಾ ವಿಷ್ಣುವಿನ ಮುಂದೆ ಬಂದು ನಿಂತನು.

"ಕೊಟ್ಟಮಾತು ಪಾಲಿಸುವುದೇ ಯುದ್ಧ ಧರ್ಮ. ನಿಮ್ಮ ಅಧಿಪತಿಗಳಿಂದಾಗಿ ದೇವತೆಗಳಿಗೆ ನಿಮ್ಮನ್ನು ಕೊಂದು ತೀರುತ್ತೇನೆಂದು ಮಾತುಕೊಟ್ಟಿದ್ದೇನೆ. ಹೀಗೆ ಓಡಿದರೆ ಬಿಡುವೆನೇ? ಪಾತಾಳಕ್ಕೆ ಹೋದರೂ ನಿಮ್ಮನ್ನು ಹುಡುಕಿ ಹುಡುಕಿ ಕೊಲ್ಲುತ್ತೇನೆ ನೀನೊಬ್ಬನನ್ನು ಕೊಂದಮಾತ್ರಕ್ಕೆ ಕಥೆ ಮುಗಿಯುವುದಿಲ್ಲ" ಎಂದನು ವಿಷ್ಣುಮೂರ್ತಿ.

ಇಬ್ಬರೂ ದ್ವಂದ್ವಯುದ್ಧಕ್ಕೆ ತೊಡಗಿದರು. ಮಾಲ್ಯವಂತನು ಗರುತ್ಮಂತನನ್ನೂ, ವಿಷ್ಣುವನ್ನೂ ಬಹಳವಾಗಿ ಪೀಡಿಸಿದನು. ಗರುತ್ಮಂತನು ತನ್ನ ರೆಕ್ಕೆಗಳಿಂದ ಹೋರುಗಾಳಿಯನ್ನು ಎಬ್ಬಿಸಿದಾಗ, ಆ ಗಾಳಿ ಮಾಲ್ಯವಂತನನ್ನು ಆಕಾಶಕ್ಕೆ ಹಾರಿಸಿತು. ಅದನ್ನು ನೋಡಿ ಸುಮಾಲಿ ತನ್ನ ಸೈನ್ಯವನ್ನು ಬಹು ವೇಗವಾಗಿ ಓಡಿಸಿಕೊಂಡು ಲಂಕೆಯ ಕಡೆಗೆ ಓಡಿದನು. ಮಾಲ್ಯವಂತನು ಹೇಗೋ ತನ್ನ ಸೇನೆಯನ್ನು ಕಲೆತುಕೊಂಡು ದೊಡ್ಡ ಪರಾಭವದ ಹೊರೆ ಹೊತ್ತ ಮುಖದಲ್ಲಿ ಲಂಕೆಗೆ ತಲುಪಿದನು. ಅಲ್ಲಿಯೂ ಅವನಿಗೆ ಕ್ಷೇಮವಿಲ್ಲವೆನಿಸಿತು.

ವಿಷ್ಣುಮೂರ್ತಿ ಸುಮ್ಮನಾಗಲಿಲ್ಲ. ಲಂಕಾವಾಸಿಗಳಾದ ರಾಕ್ಷಸರೊಂದಿಗೆ ಅನೇಕ ಯುದ್ಧಗಳನ್ನು

ಮಾಡುತ್ತ, ಅನೇಕ ಮಂದಿ ರಾಕ್ಷಸ ವೀರರನ್ನು ಕೊಲ್ಲುತ್ತಲೇ ಇದ್ದನು. ಸತ್ತು ಉಳಿದ ರಾಕ್ಷಸರು ಇನ್ನು ಉಳಿಗಾಲವಿಲ್ಲವೆಂದು ಕೊಂಡು ತಮ್ಮ ತಮ್ಮ ಹೆಂಡಿರು ಮಕ್ಕಳೊಂದಿಗೆ, ಪರಿವಾರದೊಂದಿಗೆ ಲಂಕೆಯನ್ನು ಪೂರ್ತಿಯಾಗಿ ಬಿಟ್ಟು ಪಾತಾಳಕ್ಕೆ ಹೋಗಿ ಸೇರಿಕೊಂಡರು.

ರಾಕ್ಷಸರೆಲ್ಲ ಅಲ್ಲಿಯೇ ವಾಸಿಸುತ್ತ, ಸುಮಾಲಿಯನ್ನು ತಮಗೆ ಅಧಿಪತಿಯಾಗಿ ಮಾಡಿಕೊಂಡರು. ಆ ಕಾಲದಲ್ಲಿ ವಿಷ್ಣುಮೂರ್ತಿಯ ಕೈಯಲ್ಲಿ ಸತ್ತ ಮಾಲ್ಯವಂತನೇ ಮೊದಲಾದ ರಾಕ್ಷಸರು ರಾವಣ ಕುಂಭಕರ್ಣರಿಗಿಂತಲೂ ಹೆಚ್ಚಿನ ಬಲವಂತರಾಗಿದ್ದರು. ಅಂಥವರ ಗತಿಯೇ ಅಧೋಗತಿಯಾಯಿತು.

ರಾಕ್ಷಸರೆಲ್ಲ ಲಂಕೆಯನ್ನು ಬಿಟ್ಟು ಹೊರಟು ಹೋದ ಮೇಲೆ ವೈಶ್ರವಣನು ಮತ್ತೆ ಲಂಕೆಗೆ ಬಂದು ಅಲ್ಲಿಯೇ ವಾಸಮಾಡಲು ತೊಡಗಿದನು. ಧನಾಧೀಶನಾದ ಅವನಿಗೆ ಕುಬೇರನೆಂಬ ಹೆಸರು ಬಂದಿತ್ತು.

ಹಾಗೆ ಕಾಲವು ಸಾಗುತ್ತಿರಲು, ಒಂದು ದಿನ ಸುಮಾಲಿ, ತನ್ನ ಮಗಳು ಕೈಕಸಿಯನ್ನು ಕರೆದು ಕೊಂಡು ಪಾತಾಳ ಲೋಕದಿಂದ ಹೊರಟು ಭೂಲೋಕದಲ್ಲಿ ವಿಹರಿಸತೊಡಗಿದನು. ಅವರು ಭೂಮಿಯ ವಿಶೇಷಗಳನ್ನು ನೋಡುತ್ತ ಸಂಚರಿಸಿಕೊಂಡಿರುವಾಗ, ಪುಷ್ಪಕದಲ್ಲಿ ಏರಿಕೊಂಡು ತನ್ನ ತಂದೆಯ ದರ್ಶನಕ್ಕೆ ಹೋಗುವ ಕುಬೇರನು ಅವರ ಕಣ್ಣಿಗೆ ಬಿದ್ದನು.

ಆಗ ಸುಮಾಲಿಯ ಮನಸ್ಸು ವ್ಯಗ್ರವಾಯಿತು. ಕುಬೇರನ ಐಶ್ವರ್ಯ ವೈಭವಗಳೊಂದಿಗೆ ತನ್ನ ದೌರ್ಭಾಗ್ಯ ಸ್ಥಿತಿಯನ್ನು ಹೋಲಿಸುತ್ತ, "ಏನು ಮಾಡಿದರೆ ನಾವು ಅಭಿವೃದ್ಧಿಗೆ ಬಂದೇವು ?" ಎಂದು ಆಲೋಚಿಸುತ್ತಾ ಕಡೆಗೆ ಒಂದು ಆಲೋಚನೆಯನ್ನು ಗಟ್ಟಿ ಮಾಡಿಕೊಂಡನು. ರೂಪದಲ್ಲಿ




ಅಪರ ಲಕ್ಷ್ಮೀದೇವಿಯಂತಿರುವ ತನ್ನ ಕುಮಾರಿಯನ್ನು ನೋಡಿ ಅವನು, "ಅಮ್ಮಾ, ನಿನಗೆ ಮದುವೆಯ ವಯಸ್ಸು ಬಂದಾಗಿದೆ. ನಿನ್ನನ್ನು ಮದುವೆಯಾಗಲು ಬಯಸುವವರು ಅನೇಕರಿದ್ದಾರೆ. ಆದರೆ ನೀನು ಒಪ್ಪಿಕೊಳ್ಳುವಿಯೋ ಇಲ್ಲವೋ ಎಂದು ಸಂದೇಹ ಪಡುತ್ತೇನೆ. ವಿಶ್ರವಸುವಿನ ಮಗನಾದ ಕುಬೇರನನ್ನು ನೀನು ಕಣ್ಣಾರೆ ನೋಡಿದೆಯಷ್ಟೆ ? ಅವನ ಘನವೈಭವವನ್ನು ನೋಡಿದ್ದಿತಾನೆ ? ವಿಶ್ರವಸುವಿನ ತಂದೆ ಪುಲಸ್ತ್ಯ ಬ್ರಹ್ಮ. ನೀನು ಮಹಾಮುನಿಯಾದ ವಿಶ್ರವಸುವಿನ ಸೇವೆ ಮಾಡಿದರೆ ನಿನಗೆ ಕೂಡಾ ಇಂತಹ ಮಗಂದಿರೇ ಹುಟ್ಟುತ್ತಾರೆ. ನಾನು ಹೇಳಿದ ಹಾಗೆ ಮಾಡುವಿಯಾ ಮಗಳೆ ?" ಎಂದನು.

ತಂದೆಯ ಮೇಲಿರುವ ಗೌರವದಿಂದ ಕೈಕಸಿ ವಿಶ್ರವಸು ತಪಸ್ಸು ಮಾಡುವಲ್ಲಿಗೆ ಹೋದಳು. ಅವಳು ಅವನ ಇದಿರು ಹೋಗಿ ನಿಂತಾಗ ಅವನು



ಅಗ್ನಿಯನ್ನು ಅರ್ಚಿಸಿಕೊಂಡಿದ್ದನು. ತುಂಬು ಚಂದ್ರ ವದನದಿಂದ ಬೆಳಗುತ್ತಿರುವ ಕೈಕಸಿಯನ್ನು ನೋಡಿ ವಿಶ್ರವಸು, "ಯಾರ ಮಗಳು ನೀನು? ಎಲ್ಲಿಂದ ಬಂದೆ? ಏನು ಕೆಲಸದ ಮೇಲೆ ನನ್ನ ಹತ್ತಿರ ಬಂದಿರುವೆ? ಶಂಕಿಸಬೇಡ. ನಿಜವನ್ನು ಹೇಳಿ ಬಿಡು" ಎಂದನು.

ಕೈಕಸಿ ಕೈಗಳನ್ನು ಮುಗಿದುಕೊಂಡು, "ಮುನೀಶ್ವರರಾದ ನೀವು ತಪಸ್ಸಿನ ಶಕ್ತಿಯಿಂದ ಎಲ್ಲವನ್ನೂ ತಿಳಿದುಕೊಳ್ಳುವವರು. ನಾನು ನನ್ನ ತಂದೆಯ ಆಜ್ಞೆಯಂ ಮೇರೆಗೆ ಬಂದವಳು. ನನ್ನ ಹೆಸರು ಕೈಕಸಿ. ನಿಮ್ಮ ಸೇವೆಯೇ ನನ್ನ ಭಾಗ್ಯವೆಂದು ಕೊಂಡು ಬಂದಿದ್ದೇನೆ" ಎಂದಳು.

"ಹೌದು. ತಿಳಿಯಿತು. ನನ್ನಿಂದ ಪುತ್ರರನ್ನು ಪಡೆಯಬೇಕೆಂದು ಬಂದವಳು ನೀನು" ಎಂದು ವಿಶ್ರವಸು ಅವಳನ್ನು ಯಥಾವಿಧಿಯಾಗಿ ಮದುವೆ ಮಾಡಿಕೊಂಡು, "ಕೈಕಸೀ, ನೀನು ಸಂತಾನಾಪೇಕ್ಷೆಯಿಂದ ನನ್ನ ಬಳಿಗೆ ರಾಕ್ಷಸಗಳಿಗೆಯಲ್ಲಿ ಬಂದಿರುವಿ. ಆದುದರಿಂದ ನೀನು ದಾರುಣರಾದ ಮಹಾ ಕ್ರೂರ ಗುಣಗಳುಳ್ಳ ರಾಕ್ಷಸರನ್ನು ಪ್ರಸವಿಸುವಿ" ಎಂದನು.

"ನಿಮ್ಮಂತಹ ತಪೋಧನರಿಗೆ ಅಂತಹ ಕುಮಾರರು ಹುಟ್ಟುವರೇ? ಅಂಥ ಮಕ್ಕಳು ನನಗೆ ಬೇಡ. ದಯಮಾಡಿ ಒಳ್ಳೆಯ ಮಕ್ಕಳನ್ನೇ ಅನುಗ್ರಹಿಸಬೇಕು ಸ್ವಾಮಿ" ಎಂದು ಬೇಡಿದಳು ಕೈಕಸಿ. ಅವಳು ತುಂಬಾ ಪ್ರಾರ್ಥಿಸಿಕೊಂಡ ಮೇಲೆ, "ಸರಿ. ನಿನ್ನ ಚಿಕ್ಕಮಗನು ನಿನ್ನ ವಂಶಕ್ಕೆ ತಕ್ಕವನಾಗಿರುತ್ತಾನೆ" ಎಂದನು ವಿಶ್ರವಸು.

ಸ್ವಲ್ಪಕಾಲ ಕಳೆದ ಮೇಲೆ ಕೈಕಸಿ ಒಬ್ಬ ಮಗನನ್ನು ಹೆತ್ತಳು. ಅವನು ನೋಡಲು ಪರಮ ವಿಕಾರದಲ್ಲಿದ್ದನು. ರಾಕ್ಷಸ ರೂಪದ ಭಯಂಕರವಾದ ಆಕೃತಿ. ಹತ್ತು ತಲೆಗಳು. ದೊಡ್ಡದೊಡ್ಡ ಕೋರೆ ಹಲ್ಲುಗಳು. ಕಾಡಿಗೆ ರಂಗಿನ ಶರೀರಛಾಯೆ. ಕೆಂಪಗಿನ ತುಟಿಗಳು. ಇಪ್ಪತ್ತು ಕೈಗಳು. ದೊಡ್ಡ ದೊಡ್ಡ ಬಾಯಿಗಳು. ಇಂತಹ ಮಗನಿಗೆ ಹತ್ತು ತಲೆಗಳಿರುವುದನ್ನು ನೋಡಿ ವಿಶ್ರವಸು ಅವನಿಗೆ ದಶಗ್ರೀವ (ಹತ್ತು ಕಂಠಗಳಿರುವವ) ಎಂದು ನಾಮಕರಣ ಮಾಡಿದನು. ಅವನೇ ರಾವಣ.

ರಾವಣನ ಅನಂತರ ಹುಟ್ಟಿದ ಕುಂಭಕರ್ಣನು ಮಹಾ ಬಲಶಾಲಿ. ಯಾವ ಪ್ರಾಣಿಗೂ ಇಲ್ಲದಷ್ಟು ದಪ್ಪ ತೋರ ಉದ್ದದ ಶರೀರದವನು. ಅವನ ಅನಂತರ ಹುಟ್ಟಿದವಳು ವಿಕಾರಮುಖಿದವಳು ಶೂರ್ಪಣಖಿ.

ಇವರೆಲ್ಲರ ಅನಂತರ ಹುಟ್ಟಿದವನು ವಿಭೀಷಣ. ಅವನು ಸತ್ಯವಂತನೂ, ನ್ಯಾಯಶೀಲನೂ, ಧರ್ಮಪರನೂ ಆದ ಸಾಧು ಗುಣದವನು.

ರಾವಣ ಕುಂಭಕರ್ಣರು ಅರಣ್ಯದಲ್ಲೇ ಓಡಾಡುತ್ತ ಬೆಳೆದು ದೊಡ್ಡವರಾಗುತ್ತಿದ್ದರು. ತಮ್ಮ ಅಸಾಧಾರಣವಾದ ಬಲದರ್ಪಗಳಿಂದ ಅರಣ್ಯ

ಪ್ರದೇಶವನ್ನೆಲ್ಲಾ ದಿಗಿಲುಪಡಿಸುತ್ತಲಿದ್ದರು. ಕುಂಭಕರ್ಣನು ಋಷಿಗಳನ್ನು ಹಿಡಿದು ತಿಂದು ಬಿಡುವನು. ವಿಭೀಷಣನು ಮಾತ್ರ ನಿಯತಾಹಾರಿಯಾಗಿದ್ದು, ನಿಯಮ ನಿಷ್ಠೆಗಳಿಂದ ಕಾಲಕಳೆಯುತ್ತಿದ್ದನು.

ಅವರೆಲ್ಲಾ ಆಶ್ರಮದಲ್ಲಿರುವಾಗ ಒಂದು ದಿನ ಕುಬೇರನು ಪುಷ್ಪಕ ವಿಮಾನದಲ್ಲಿ ತಂದೆಯನ್ನು ನೋಡಲು ಬಂದನು. ಕುಬೇರನ ತೇಜಸ್ಸನ್ನೂ ಐಶ್ವರ್ಯವನ್ನೂ ನೋಡಿ ಅಸೂಯೆ ಪಟ್ಟ ಕೈಕಸಿ ಹಿರಿಯ ಮಗನಾದ ರಾವಣನನ್ನು ನೋಡಿ, "ನಿನ್ನ ಅಣ್ಣನಾದ ಕುಬೇರನ ವೈಭವ ನೋಡಿದೆಯಾ ದಶಗ್ರೀವಾ ? ನೀನು ಕೂಡಾ ಆ ತಂದೆಗೆ ಹುಟ್ಟಿದವನು ತಾನೆ ? ನೀನು ಹೇಗಿರುವಿ ? ನೀನು ಹೇಗಾದರೂ ನಿನ್ನ ಆ ಅಣ್ಣನ ಹಾಗೆ ಆದರೇನೇ ನನಗೆ ಸಂತೋಷವಪ್ಪಾ" ಎಂದಳು.

ಅತ್ಯಂತ ರೋಷಗಾರನೂ ಬಲಿಷ್ಠನೂ ಆದ ರಾವಣನಿಗೆ ತಾಳಲಾಗದಷ್ಟು ರೋಷ ಬಂದಿತು. ಅವನು ತನ್ನ ತಾಯಿಯೊಂದಿಗೆ, "ಅಮ್ಮಾ, ನಾನು ನನ್ನ ಅಣ್ಣನ ಸಮಾನನೋ, ಅವನಿಗಿಂತಲೂ ಹೆಚ್ಚಿನವನೋ ಆಗದೆ ಬಿಡಲಾರೆನು. ನೋಡುತ್ತಾ ಇರು, ಚಿಂತಿಸಬೇಡಮ್ಮಾ" ಎಂದು ಪ್ರತಿಜ್ಞೆ ಮಾಡಿದನು. ಅವನು ಕುಂಭಕರ್ಣನೊಂದಿಗೆ ಕೂಡಿ ಮಹತ್ತರವಾದ ಕಾರ್ಯಗಳನ್ನು ಮಾಡಬೇಕೆಂದು ಸಂಕಲ್ಪಿಸಿಕೊಂಡನು. ಹಾಗೆಯೇ ವಿಭೀಷಣನನ್ನೂ ಒಪ್ಪಿಸಿದನು. ಆ ಮೂವರು ಸಹೋದರರೂ ಕೂಡಿ ಗೋಕರ್ಣಾಶ್ರಮಕ್ಕೆ ಹೋಗಿ ಅಲ್ಲಿ ತಪಸ್ಸಿಗೆ ಕುಳಿತರು. ರಾವಣನು ಬಹು ತೀವ್ರವಾದ ನಿಷ್ಠೆಯಿಂದ ತಪಸ್ಸು ಮಾಡುತ್ತಿರಲು, ಕುಂಭಕರ್ಣ, ವಿಭೀಷಣರೂ ಹಾಗೆಯೇ ಮಾಡುತ್ತಿದ್ದರು.

ರಾವಣನು ನಿರಾಹಾರಿಯಾಗಿ ಹತ್ತು ಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದನು. ಅವನು ಸಾವಿರ ವರ್ಷಗಳಿಗೆ ಒಂದು ತಲೆಯಂತೆ ತನ್ನ



ಒಂದೊಂದು ತಲೆಯನ್ನು ಕಡಿದು ಅಗ್ನಿಗೆ ಹಾಕಿದನು. ಅವನ ಹತ್ತು ತಲೆಗಳಲ್ಲಿ ಒಂಬತ್ತು ತಲೆಗಳು ಹಾಗೆ ಅಗ್ನಿಗೆ ಆಹುತಿಯಾದವು. ಒಂದು ತಲೆ ಮಾತ್ರವೇ ಉಳಿದಿತ್ತು. ಹತ್ತನೇ ಸಾವಿರ ವರ್ಷ ಮುಗಿಯುವಾಗ ಅವನು ಉಳಿದಿದ್ದ ತಲೆಯನ್ನೂ ಕಡಿಯಲು ನೋಡುವಾಗ ಬ್ರಹ್ಮನು ದಿಕ್ಪಾಲಕರೊಂದಿಗೆ ಅವನ ಮುಂದೆ ಪ್ರತ್ಯಕ್ಷನಾಗಿ, "ಓ ! ದಶಗ್ರೀವಾ ! ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನಗೆ ಇಷ್ಟವಾದ ವರವನ್ನು ಕೇಳಿಕೋ" ಎಂದನು.

ರಾವಣನು ಪರಮಾನಂದಭರಿತನಾಗಿ, ಬ್ರಹ್ಮನಿಗೆ ಸಾಷ್ಟಾಂಗ ಎರಗಿ, "ತಾತಾ, ಪ್ರಾಣಿಗಳಿಗೆ ಮರಣ ಭಯಕ್ಕಿಂತ ಹೆಚ್ಚಿನ ಭಯವು ಬೇರೊಂದಿಲ್ಲ. ನನಗೆ ಮರಣವಿಲ್ಲದಂತೆ ವರ ಕೊಡು" ಎಂದನು.

"ಅಪ್ಪಾ, ಅಂತಹ ವರವನ್ನು ಕೊಡಲು ಸಾಧ್ಯವಾಗದು. ಬೇರೆ ವರವನ್ನು ಕೇಳು" ಎಂದನು ಬ್ರಹ್ಮದೇವ.

"ಹಾಗಾದರೆ ಇತರ ಪ್ರಾಣಿಗಳ ಭಯ ನನಗಿಲ್ಲ. ನನಗೆ ನನ್ನವರಿಂದ, ನಾಗರಿಂದ, ಯಕ್ಷರಿಂದ ದೈತ್ಯರಿಂದ, ದಾನವರಿಂದ, ರಾಕ್ಷಸರಿಂದ ಸಾವು ಬಾರದಂತೆ ವರವನ್ನು ಕೊಡು. ಮನುಷ್ಯರೇ ಮೊದಲಾದ ಅಲ್ಪ ಪ್ರಾಣಿಗಳ ಬಗ್ಗೆ ನನಗೇನೂ ಚಿಂತೆಯಿಲ್ಲ. ಅವರೆಲ್ಲಾ ಹುಲ್ಲಿಗೆ ಸಮಾನರು" ಎಂದನು ರಾವಣ.

ರಾವಣನು ಕೇಳಿಕೊಂಡಂತೆ ಬ್ರಹ್ಮನು ವರವನ್ನು ಕೊಟ್ಟನು. ಆ ವರದೊಂದಿಗೆ ರಾವಣನಿಗೆ ಹತ್ತು ತಲೆಗಳೂ ಬರುವಂತೆ ಮಾಡಿ, ಇಚ್ಛಿಸಿದ ರೂಪ ತಾಳುವಂತೆಯೂ ಬ್ರಹ್ಮನು ವರಕೊಟ್ಟನು.

ತರುವಾಯ ಬ್ರಹ್ಮನು ವಿಭೀಷಣನನ್ನು ಏನು ವರಬೇಕೆಂದು ಕೇಳಿದನು. ತನ್ನ ಮನಸ್ಸು ಧರ್ಮ ಮಾರ್ಗ ತಪ್ಪದಂತಿರಬೇಕೆಂದೂ, ತನಗೆ ಬ್ರಹ್ಮಾಸ್ತ್ರವು ಸ್ಫುರಿಸಬೇಕೆಂದೂ ವಿಭೀಷಣನು ವರ ಕೇಳಿದನು. ಬ್ರಹ್ಮನು ಅವನಿಗೆ ಹಾಗೆಯೇ ವರವಿತ್ತು, ಮರಣವಿಲ್ಲದಂತೆಯೂ ವಿಶೇಷ ವರವನ್ನೂ ಕೊಟ್ಟನು.

ಆಮೇಲೆ ವರ ಕೇಳುವ ಸರದಿ ಕುಂಭಕರ್ಣನ ದಾಯಿತು.

ಆಗ ದೇವತೆಗಳು ಬ್ರಹ್ಮನೊಂದಿಗೆ, "ದೇವಾ, ಕುಂಭಕರ್ಣನಿಗೆ ಮಾತ್ರ ವರ ಕೊಡಬಾರದು. ಅವನು ನಂದನವನದಲ್ಲಿ ವಿಹರಿಸುವ ಏಳು ಮಂದಿ ಅಪ್ಸರಸಿಯರನ್ನು ನುಂಗಿಬಿಟ್ಟನು. ದೇವೇಂದ್ರನ ಹತ್ತು ಮಂದಿ ಅನುಚರರನ್ನು ತಿಂದಿದ್ದಾನೆ. ಎಷ್ಟು ಋಷಿಗಳನ್ನೂ, ಮುನಿಗಳನ್ನೂ ತಿಂದಿದ್ದಾನೋ ಲೆಕ್ಕವಿಲ್ಲ. ವರಗಳನ್ನು ಪಡೆಯುವ ಮೊದಲೇ ಅವನು ಹಾಗಿರುವಾಗ ವರ ಪಡೆದ ಮೇಲೆ ಹೇಗಾಗುವನೋ ?" ಎಂದರು.

ಆಗ ಸರಸ್ವತಿಯ ಪ್ರಭಾವದಿಂದ ಕುಂಭಕರ್ಣನು "ತಾತಾ, ನನಗೆ ವರ್ಷಗಟ್ಟಲೆ ನಿದ್ದೆ ಬರುವ ಹಾಗೆ ವರ ಕೊಡು" ಎಂದು ಕೇಳಲು, ಬ್ರಹ್ಮನು "ತಥಾಸ್ತು" ಎಂದು ಹೇಳಿ ಅದೃಶ್ಯನಾದನು. ಕುಂಭಕರ್ಣನ ನಾಲಗೆಯಾಡಿಸಿದ ಸರಸ್ವತಿಯೂ ಹೊರಟುಹೋದಳು.

ಕೂಡಲೇ ಕುಂಭಕರ್ಣನಿಗೆ ಜ್ಞಾನ ಬಂದು, "ಛೀ ! ಛೀ ! ಈ ಬಗೆಯ ವರವನ್ನು ಕೇಳಿದೆನೇಕೆ ? ಏನಾಯಿತು ನನಗೆ ? ದೇವತೆಗಳೇ ಏನೋ ಮೋಸ ಮಾಡಿಬಿಟ್ಟರು !" ಎಂದು ಬಹಳವಾಗಿ ಚಿಂತಿಸಿದನು.

ಹೀಗೆ ರಾವಣ, ಕುಂಭಕರ್ಣ, ವಿಭೀಷಣರು ಬ್ರಹ್ಮನಿಂದ ವರಗಳನ್ನು ಪಡೆದು ಶ್ಲೇಷ್ಮಾತಕ ವೆಂಬ ವನಕ್ಕೆ ಹೋಗಿ ಅಲ್ಲಿ ವಾಸಮಾಡಲು ತೊಡಗಿದರು.






ಪಾತಾಳದಲ್ಲಿರುವ ಸುಮಾಲಿಗೆ ತನ್ನ ಮೂವರು ಮೊಮ್ಮಕ್ಕಳೂ ಬ್ರಹ್ಮನನ್ನು ಮೆಚ್ಚಿಸಿ ದೊಡ್ಡ ದೊಡ್ಡ ವರಗಳನ್ನು ಪಡೆದ ಸಂಗತಿ ತಿಳಿದು ಸಂತೋಷವಾಯಿತು. ಸುಮ್ಮನಿರಲಾಗದೆ ಅವನು ಕೂಡಲೇ ಪಾತಾಳದಿಂದ ಮೇಲೇಳುವ ಆಲೋಚನೆಗೆ ತೊಡಗಿದನು.

ತನ್ನ ಮಂತ್ರಿಗಳಾದ ಮಾರೀಚ, ಪ್ರಹಸ್ತ, ವಿರೂಪಾಕ್ಷ ಮಹೋದರರರಂತಹ ಮುಖ್ಯಸ್ಥರನ್ನು ಕರೆದುಕೊಂಡು ಅಟ್ಟಹಾಸದಿಂದ ಹೊರಟು ಭೂಮಿಯ ಮೇಲೆ ಬಂದು ಉತ್ಸಾಹದಿಂದ ರಾವಣನ ಹತ್ತಿರ ಹೋದನು.

ಸುಮಾಲಿ ರಾವಣನನ್ನು ಆಲಿಂಗಿಸಿಕೊಂಡು, "ಕಂದಾ, ಇಷ್ಟು ಕಾಲದ ಮೇಲೆ ನನ್ನ ಕೋರಿಕೆ ಹಣ್ಣಾಯಿತು. ಯಾವ ವಿಷ್ಣುವಿನ ಭಯದಿಂದ ನಾವೆಲ್ಲಾ ಲಂಕೆಯನ್ನು ಬಿಟ್ಟು ಪಾತಾಳಕ್ಕೆ ಹೊರಟು ಹೋದೆವೋ ಆ ವಿಷ್ಣುವಿನ ಭಯ ಈಗ ಹೋಯಿತು. ಹೇಗೆಂದರೆ ನೀನು ಬ್ರಹ್ಮದೇವನನ್ನು ಮೆಚ್ಚಿಸಿ ಉತ್ತಮವಾದ, ನಮ್ಮ ಅಭಿವೃದ್ಧಿಗೆ ಸಾಧಕವಾದ ವರಗಳನ್ನು ಪಡೆದಿರುವಿ. ನಿಜಕ್ಕೂ ಲಂಕಾ ನಗರವು ರಾಕ್ಷಸರಿಗೇ ಸ್ವಂತವಾದುದು. ಬುದ್ಧಿಶಾಲಿಯಾದ ನಿನ್ನ ಸವತಿ ತಾಯಿಯ ಮಗನಾದ ಕುಬೇರನು ಅದನ್ನು ಆಕ್ರಮಿಸಿಕೊಂಡು ಕುಳಿತಿದ್ದಾನೆ. ನೀನು ಸಮಯ ನೋಡಿ ಒಳ್ಳೆಯ ಮಾತಿನಿಂದಲೋ, ಲಂಚ ಕೊಟ್ಟೋ, ಕಡೆಗೆ ಬಲಾತ್ಕಾರದಿಂದಲೇ ಆದರೂ ನಿನ್ನ ಅಣ್ಣನ ಕೈಯಿಂದ ಲಂಕೆಯನ್ನು ತಿರುಗಿ ಪಡೆಯಬೇಕು. ಎಲ್ಲಾ ವಿಧದಲ್ಲಿಯೂ ತಕ್ಕವನಾದ ನೀನೇ ಲಂಕಾ ನಗರಕ್ಕೆ ರಾಜನಾಗಿ ಪಾಲಿಸಿಕೊಂಡಿದ್ದರೆ ದಿಕ್ಕಲ್ಲದೆ ಹೋದ ರಾಕ್ಷಸ ವಂಶವನ್ನು ಉದ್ಧರಿಸಿದವನಾಗುವಿ. ರಾಕ್ಷಸರಾರೂ ನಿನ್ನನ್ನು ಮರೆಯಲಾರರು. ಇದರಿಂದ ನಿನ್ನ ಕೀರ್ತಿಯೂ ದೊಡ್ಡದಾಗುತ್ತದೆ" ಎಂದನು.

ಅದನ್ನೆಲ್ಲಾ ಕೇಳಿ ರಾವಣನು "ನೀವೇನು ಹೇಳುವಿರಿ ತಾತಾ? ಕುಬೇರನು ನಮಗೆ ತಂದೆಗೆ ಸಮಾನನು. ಅಂಥವನನ್ನು ಕುರಿತು ನೀವು ಹೀಗೆಲ್ಲಾ

**೧. ರಾವಣನ ಲಂಕಾ ನಗರ ಪ್ರವೇಶ**



ಹೇಳುವುದುಂಟೆ? ಅಂಥಾ ಧರ್ಮಬಾಹಿರವಾದ ಮಾತುಗಳನ್ನು ನಾನು ಕೇಳುವುದೂ ತಪ್ಪು ತಾತಾ" ಎಂದನು ರಾವಣ.

ಸುಮಾಲಿಗೆ ಮತ್ತೇನು ಹೇಳಲಿಕ್ಕೂ ತೋರಲಿಲ್ಲ. ಆಗ ಸುಮಾಲಿಯ ಮಂತ್ರಿಗಳಲ್ಲಿ ಒಬ್ಬನಾದ ಪ್ರಹಸ್ತನು ರಾವಣನನ್ನು ಏಕಾಂತದಲ್ಲಿ ಸಂಧಿಸಿ, ಈ ವಿಧವಾಗಿ ತನ್ನ ವಾಕ್ಚಾತುರ್ಯದಿಂದ ಅರೆದರೆದು ಹೇಳತೊಡಗಿದನು :

"ಅಪ್ಪಾ, ರಾವಣಾ, ನೀನು ನಿನ್ನ ತಾತಯ್ಯನೊಂದಿಗೆ ಹೇಳಿದ ಮಾತು ಸಂಭಾವ್ಯವಾದುದಲ್ಲ. ಶೂರರಾದವರಿಗೆ ಅಣ್ಣ ತಮ್ಮ ಎಂಬ ವಿಚಕ್ಷಣೆಯಿರಬಾರದು. ಅಣ್ಣ ತಮ್ಮಂದಿರ ವೈರವು ಆದಿಯಿಂದಲೂ ಬಂದುಕೊಂಡೇ ಇದೆ. ಅವರ ಮೇಲೆ ಕುಬೇರನು ನಿನಗೆ ಸವತಿಯಣ್ಣನಷ್ಟೇ ತಾನೇ? ಅದಿತಿಯೂ ದಿತಿಯೂ ಅಕ್ಕ ತಂಗಿಯರು. ಇಬ್ಬರೂ ಕಶ್ಯಪಬ್ರಹ್ಮನ ಪತ್ನಿಯರಾಗಿ ದೇವತೆಗಳನ್ನೂ, ರಾಕ್ಷಸರನ್ನೂ ಪಡೆದಿದ್ದಾರೆ. ಆದರೆ ವಿಷ್ಣು ರಾಕ್ಷಸರನ್ನು ಸದೆಬಡಿದು ಮೂರು ಲೋಕಗಳನ್ನೂ ದೇವತೆಗಳಿಗೇ ಕೊಟ್ಟಿದ್ದಾನೆ. ಈ ಲಂಕೆ ಮಾತ್ರವಲ್ಲ, ಭೂಮಂಡಲವನ್ನೆಲ್ಲಾ ಒಂದು ಕಾಲದಲ್ಲಿ ರಾಕ್ಷಸರೇ ಅನುಭವಿಸಿಕೊಂಡಿದ್ದರು. ನಾವು ನಿನ್ನನ್ನು ಹೊಸತಾಗಿ ತಪ್ಪು ಕೆಲಸ ಮಾಡಲು ಹಚ್ಚುವುದಿಲ್ಲ. ಈ ಅನ್ಯಾಯವು ಎಂದಿನಿಂದಲೋ ನಡೆದುಕೊಂಡು ಬರುತ್ತಾ ಇದೆ. ನಿವಾರಿಸಲು ನಮ್ಮಲ್ಲಿ ತಕ್ಕವರಿಲ್ಲದೇ ಹೋದರು. ಈಗ ನೀನು ಅದಕ್ಕೆ ತಕ್ಕವನಾಗಿರುವಿ. ಆದುದರಿಂದ ನಾವು ಹೇಳಿದ ಹಾಗೆ ಮಾಡಿದರೆ ತಪ್ಪೇನೂ ಆಗುವುದಿಲ್ಲ. ನಿನ್ನಿಂದಾಗಿ ನಾವೆಲ್ಲರೂ ಸುಖವಾಗಿರಬಹುದು. ನೀನು ಪಡೆದ ವರಗಳಿಂದ ವಿಷ್ಣುವಿನ ಭಯವಂತೂ ಇಲ್ಲ."

ಅವನ ಬೋಧನೆಗಳನ್ನು ಕೇಳಿ ರಾವಣನು ಸ್ವಲ್ಪ ಯೋಚನೆ ಮಾಡಿ, ಕಡೆಗೆ ಆಗಲಿ ಎಂದು ಒಪ್ಪಿಕೊಂಡನು.

ಆಮೇಲೆ ಮಾತಿನಲ್ಲಿ ಜಾಣನಾದ ಪ್ರಹಸ್ತನನ್ನೇ ತನ್ನ ದೂತನಾಗಿ ಕುಬೇರನ ಬಳಿಗೆ ಕಳುಹಿಸಿದನು. ಅವನೊಡನೆ ರಾವಣನು ಹೀಗೆ ಹೇಳಿ ಕುಬೇರನಿಗೆ ಸಂದೇಶ ಕೊಟ್ಟಿದ್ದನು :

"ಅಣ್ಣಾ, ಈಗ ನಿನ್ನ ಅಧೀನದಲ್ಲಿರುವ ಲಂಕೆ, ರಾಕ್ಷಸರಿಗೆ ಸ್ವಂತದ್ದು. ಆದುದರಿಂದ ನೀನು ಒಳ್ಳೆಯದರಲ್ಲಿಯೇ ಲಂಕೆಯನ್ನು ರಾಕ್ಷಸರಿಗೆ ಒಪ್ಪಿಸಿಬಿಟ್ಟರೆ, ಧರ್ಮರೀತಿಯಾಗಿ ನಡೆದ ಹೆಸರು ನಿನಗೆ ಬರುತ್ತದೆ. ತಮ್ಮನ ಅಪೇಕ್ಷೆಯನ್ನು ತೀರಿಸಿದ ಒಳ್ಳೆಯ ಅಣ್ಣನು ನೀನಾಗುವಿ. ರಾಕ್ಷಸರೆಲ್ಲರೂ ನಿನ್ನನ್ನು ಮೆಚ್ಚುತ್ತಾರೆ."

ರಾವಣನ ಪರವಾಗಿ ಪ್ರಹಸ್ತನು ಬಂದು ಈ ಮಾತುಗಳನ್ನು ಹೇಳಿದ ಕೂಡಲೇ, ಕುಬೇರನು ರಾವಣನೊಂದಿಗೆ, ಹೀಗೆ ಹೇಳುವಂತೆ ಪ್ರಹಸ್ತನೊಂದಿಗೆ ಹೇಳಿ ಕಳುಹಿಸಿದನು : "ತಮ್ಮಾ,

ರಾವಣಾ, ನಮ್ಮ ತಂದೆ ನನಗೆ ಈ ಲಂಕಾ ನಗರವನ್ನು ಕೊಡುವಾಗ ಇಲ್ಲಿ ರಾಕ್ಷಸನೊಬ್ಬನೂ ಇರಲಿಲ್ಲ. ನಾನೂ ನನ್ನ ಯಕ್ಷರೂ ಇಲ್ಲಿ ವಾಸಮಾಡುತ್ತಿದ್ದೇವೆ. ನನ್ನ ರಾಜ್ಯವೂ, ನನ್ನ ಐಶ್ವರ್ಯಗಳೂ, ನನ್ನ ಪಟ್ಟಣವೂ ನಿನ್ನದೂ ಅಲ್ಲವೇನು ? ಲಂಕಾನ:.ರವನ್ನು ನಿ' ಗೆ ಕೊಡಲು ನನಗೆ ಸಂತೋಷವೇ ಆಗುತ್ತದೆ. ಇಲ್ಲಿಗೆ ಬಂದು ಹಾಯಾಗಿ ಲಂಕಾ ರಾಜ್ಯವನ್ನು ಆಳಿಕೋ. ಒಂದೇ ತಂದೆಯ ಮಕ್ಕಳಾದ ನಮ್ಮೊಳಗೆ ವ್ಯತ್ಯಾಸವನ್ನೇಕೆ ನೋಡುತ್ತೀ ? "

ಈ ಸಂದೇಶವನ್ನು ಪ್ರಹಸ್ತನ ಮೂಲಕ ಕಳುಹಿಸಿದ ಕುಬೇರನು ಈ ವಿಷಯವನ್ನು ತಂದೆಗೆ ತಿಳಿಸುವುದು ಧರ್ಮವೆಂದುಕೊಂಡು, ಕೂಡಲೇ ಪುಷ್ಪಕ ವಿಮಾ`ವನ್ನೇರಿ ತನ್ನ ತಂದೆಯ ಹತ್ತಿರ ಹೋಗಿ ನಡೆದ ಸಮಾಚಾರವನ್ನು ಹೇಳಿದನು.



ವಿಶ್ರವಸು ಕುಬೇರನು ಹೇಳಿದುದನ್ನು ಕೇಳಿ, "ಅಪ್ಪಾ, ನಾನೊಂದು ಹೇಳುತ್ತೇನೆ, ಕೇಳು. ರಾವಣನು ಈ ಮಾತುಗಳನ್ನು ನನ್ನೊಂದಿಗೆ ಹೇಳಿದ್ದಕ್ಕೆ ನಾನು ಕೋಪಗೊಂಡಿದ್ದೆನು. ಈಗ ಅವನು ವರಗಳನ್ನು ಪಡೆದುಕೊಂಡು ಗರ್ವದಲ್ಲಿ ಮೈಮರೆತಿದ್ದಾನೆ. ನೀನು ಮಾತ್ರ ಲಂಕೆಯನ್ನು ಬಿಟ್ಟು, ಕೈಲಾಸ ಪರ್ವತದ ಮೇಲೆ ಹೋಗಿ ಅಲ್ಲಿಯೇ ನಿವಾಸದ ಏರ್ಪಾಡು ಮಾಡಿಕೋ. ಅಲ್ಲಿ ಮಂದಾಕಿನೀ ನದಿಯಲ್ಲಿ ಬಂಗಾರದ ತಾಮರೆ ಹೂಗಳಿವೆ. ಆ ಪರ್ವತದ ಮೇಲೆ ಯಾವಾಗಲೂ ದೇವತೆಗಳೂ, ಅಪ್ಸರಸಿಯರೂ, ಉರಗರೂ, ಕಿನ್ನರರೂ ವಿಹರಿಸಿಕೊಂಡಿರುತ್ತಾರೆ. ಮುಖ್ಯವಾಗಿ ಪ್ರಸ್ತುತದಲ್ಲಿ ನೀನು ರಾವಣನೊಂದಿಗೆ ವೈರವಿಟ್ಟುಕೊಳ್ಳಬಾರದು. ಈಗ ನೀನು ಮಾಡಿದ ಕೆಲಸ ಯೋಗ್ಯವೇ ಆಗಿದೆ" ಎಂದು ಸಲಹೆ ಮಾಡಿದನು.

ಕುಬೇರನು ನಿರ್ಮಲ ಮನಸ್ಸಿನಿಂದ ತಂದೆಯ ಮಾತನ್ನು ಅಕ್ಷರಶಃ ಪಾಲಿಸುವವನಾಗಿ ತನ್ನ ಹೆಂಡತಿಯನ್ನೂ, ಮಕ್ಕಳನ್ನೂ, ಮಂತ್ರಿಗಳನ್ನೂ, ಪರಿವಾರವನ್ನೂ, ಧನವನ್ನೂ, ವಾಹನಗಳನ್ನೂ ತೆಗೆದುಕೊಂಡು ಕೈಲಾಸ ಪರ್ವತಕ್ಕೆ ಹೊರಟು ಹೋದನು. ತಂದೆ ಹೇಳಿದಂತೆಯೇ ಅದು ಅವನಿಗೆ ಎಲ್ಲ ವಿಧದಲ್ಲಿಯೂ ಆಹ್ಲಾದಕರವಾದ ಪ್ರದೇಶವಾಗಿತ್ತು.

ಪ್ರಹಸ್ತನು ಅತ್ಯಾನಂದದಿಂದ ರಾವಣನ ಬಳಿಗೆ ಬಂದು, "ರಾವಣಾ, ಲಂಕಾ ನಗರವು ಬಹು ಸುಲಭವಾಗಿ ಖಾಲಿಯಾಯಿತು. ಕುಬೇರನು ನಿನಗೆ ಹೆದರಿ ಒಳ್ಳೆಯ ಮರ್ಯಾದೆಯಿಂದಲೇ ಅಲ್ಲಿಂದ ತನ್ನ ಸಕಲ ಪರಿವಾರದೊಂದಿಗೆ ಹೊರಟುಹೋಗಿಬಿಟ್ಟನು. ಇನ್ನು ನೀನು ಅಲ್ಲಿಗೆ ಹೋಗಿ ನಮ್ಮವರನ್ನೆಲ್ಲಾ ಸೇರಿಸಿಕೊಂಡು ನಿರಾತಂಕವಾಗಿ ರಾಜ್ಯಭಾರ ಮಾಡು" ಎಂದನು.

ರಾವಣನು ತನ್ನ ತಮ್ಮಂದಿರನ್ನೂ, ಇತರ ಬಳಗವನ್ನೂ ಕರೆದುಕೊಂಡು ಲಂಕೆಗೆ ಹೋದನು. ಅಲ್ಲಿ



ಅವನಿಗೆ ಬಹು ವೈಭವದಿಂದ ರಾಜ್ಯಾಭಿಷೇಕ ವಾಯಿತು. ರಾಕ್ಷಸರಿಂದ ತುಂಬಿ ಕಿಕ್ಕಿರಿಸುವ ಲಂಕಾ ನಗರಕ್ಕೆ ಹೊಸ ಕಳೆ ಬಂದಿತು.

ಹೀಗೆ ಇಲ್ಲಿ ರಾವಣನು ಲಂಕಾ ನಗರವನ್ನು ಪಾಲಿಸಿಕೊಂಡಿರುವಾಗ, ಅಣ್ಣನಾದ ಕುಬೇರನು ಕೈಲಾಸ ಪರ್ವತದಲ್ಲಿ ಅಲಕಾ ನಗರವನ್ನು ನಿರ್ಮಿಸಿ ಕೊಂಡು ವೈಭವದಿಂದ ಅದನ್ನು ಪಾಲಿಸಲು ತೊಡಗಿದನು.

ಲಂಕಾಧಿಪತ್ಯವನ್ನು ಪಡೆದ ಮೇಲೆ ರಾವಣನು ತನ್ನ ತಂಗಿಯಾದ ಶೂರ್ಪಣಖೆಯನ್ನು, ಕಾಲಕೇಯ ವಂಶದಲ್ಲಿ ಹುಟ್ಟಿದ ವಿದ್ಯುಜ್ಜಿಹ್ವನೆಂಬವನಿಗೆ ಕೊಟ್ಟು ಮದುವೆ ಮಾಡಿದನು. ಅದು ರಾವಣನು ಮೊದಲು ಮಾಡಿದ ಕಲ್ಯಾಣ ಕಾರ್ಯ ಮಹೋತ್ಸವವೆನಿಸಿತು.

ಹಾಗೆ ಕಾಲ ಕಳೆಯುತ್ತಿರಲು, ಒಂದು ದಿನ ರಾವಣನು ಬೇಟೆಯಾಡಲು ಅರಣ್ಯಕ್ಕೆ ಹೋದನು. ಅಲ್ಲಿರುವ ಒಬ್ಬ ದೊಡ್ಡ ಮನುಷ್ಯನನ್ನೂ, ಅವನೊಂದಿಗಿರುವ ಸುಂದರೀಮಣಿಯಾದ ಒಬ್ಬಳು ಹುಡುಗಿಯನ್ನೂ ನೋಡಿದನು.

"ಯಾರು ನೀವು? ಅರಣ್ಯದಲ್ಲಿ ಈ ಹುಡುಗಿ ಯನ್ನಿಟ್ಟುಕೊಂಡು ಏಕೆ ತಿರುಗುತ್ತಿರುವಿರಿ?" ಎಂದು ರಾವಣನು ಆ ದೊಡ್ಡ ಮನಷ್ಯನನ್ನು ಕೇಳಿದನು.

ಅದಕ್ಕೆ ಆ ದೊಡ್ಡವನು ಹೀಗೆಂದನು: "ಅಪ್ಪಾ, ನಾನು ದಿತಿಯ ಮಗ. ಮಯನೆಂದು ನನ್ನ ಹೆಸರು. ನೀನು ಹೇಮಾ ಎಂಬ ಅಪ್ಸರಸಿಯನ್ನು ಕುರಿತು ಕೇಳಿರಬಹುದು. ದೇವತೆಗಳು ನನಗೆ ಆ ಹೇಮಳೊಂದಿಗೆ ಮದುವೆ ಮಾಡಿದರು. ಈ ಹುಡುಗಿ ನಮ್ಮಿಬ್ಬರಿಗೂ ಹುಟ್ಟಿದ ಮಗಳು. ಇವಳ ಹೆಸರು ಮಂದೋದರಿ. ಹದಿನಾಲ್ಕು ವರ್ಷಗಳ ಹಿಂದೆ ಹೇಮ ನನ್ನನ್ನು ಬಿಟ್ಟು ಸ್ವರ್ಗಕ್ಕೆ ಹೊರಟು ಹೋದಳು. ಈ ಹುಡುಗಿಗೆ ತಕ್ಕ ಗಂಡನನ್ನು ಹುಡುಕುತ್ತಾ ಹೀಗೆ ಹೊರಟಿದ್ದೇನೆ. ಈ ಹುಡುಗಿ ಮಾತ್ರವಲ್ಲದೆ ಮತ್ತಿಬ್ಬರು ಗಂಡು ಮಗಂದಿರನ್ನೂ ಹೇಮಳು ಹೆತ್ತಿದ್ದಾಳೆ. ಒಬ್ಬನ ಹೆಸರು ಮಾಯಾವಿ. ಎರಡನೆಯವನ ಹೆಸರು ದುಂದುಭಿ. ನನ್ನ ಸಂಗತಿ ಯನ್ನು ಕೇಳಿದುದರಿಂದ ಯಥಾರ್ಥವನ್ನು ಹೇಳಿ ದ್ದೇನೆ. ಇನ್ನು ನಿನ್ನ ಸಂಗತಿ ಕೂಡಾ ತಿಳಿಯುವ ಕುತೂಹಲದಲ್ಲಿದ್ದೇನೆ. ಹೇಳಿದರೆ ಸಂತೋಷಿಸುತ್ತೇನೆ."

"ನಾನು ಪುಲಸ್ತ್ಯಬ್ರಹ್ಮನ ಮೊಮ್ಮಗನು. ವಿಶ್ರವೋಬ್ರಹ್ಮನ ಮಗನು. ನನ್ನ ಹೆಸರು ದಶ ಗ್ರೀವ. ರಾವಣನೆಂತಲೂ ಹೆಸರಿದೆ. ಕುಂಭಕರ್ಣ, ವಿಭೀಷಣರೆಂಬ ತಮ್ಮಂದಿರೂ, ಒಬ್ಬಳು ತಂಗಿಯೂ ನನಗಿದ್ದಾರೆ" ಎಂದನು ರಾವಣ.

ರಾವಣನು ಮಹರ್ಷಿಗಳ ವಂಶದಲ್ಲಿ ಹುಟ್ಟಿದವ ನೆಂದು ತಿಳಿದುಕೂಡಲೇ ಮಯನು ತನ್ನ ಕುಮಾರಿ ಯನ್ನು ಅವನಿಗೆ ಕೊಟ್ಟು ಮದುವೆ ಮಾಡಲು ಸಿದ್ಧನಾದನು. ಅದಕ್ಕೆ ರಾವಣನೂ ತನ್ನ ಅಂಗೀಕಾರ ತಿಳಿಸಿದನು. ಆಗಲೇ ಅಲ್ಲಿಯೇ ಅಗ್ನಿಯನ್ನು

ಪ್ರಜ್ವಲಿಸಿ, ಮಯನು ತನ್ನ ಕುಮಾರಿಯ ಕೈಯನ್ನು ರಾವಣನ ಕೈಯಲ್ಲಿಟ್ಟು ವಿವಾಹ ಮಾಡಿದನು. ಆಗ ಮಯನು ಅಳಿಯನಿಗೆ ಒಂದು ಮಹಾ ಶಕ್ತ್ಯಾಯುಧವನ್ನು ಬಳುವಳಿಯಾಗಿ ಕೊಟ್ಟನು. ಅದು ದೊಡ್ಡ ತಪಸ್ಸಿನಿಂದ ಮಯನು ಪಡೆದುಕೊಂಡುದಾಗಿತ್ತು. ಆದರಿಂದಲೇ ರಾವಣನು ಮುಂದೆ ನಡೆದ ಮಹಾ ಯುದ್ಧದಲ್ಲಿ ಲಕ್ಷ್ಮಣನನ್ನು ಹೊಡೆದು ಮೂರ್ಛೆ ಬೀಳಿಸಿದ್ದು.

ರಾವಣನು ತನ್ನ ಹೆಂಡತಿಯೊಂದಿಗೆ ಸಹಾ ಲಂಕೆಗೆ ಹೋಗಿ ತನ್ನ ತಮ್ಮಂದಿರ ಮದುವೆಗೆ ಪ್ರಯತ್ನ ಮಾಡಿದನು. ವೈರೋಚನನ ಮೊಮ್ಮಗಳಾದ ವಜ್ರಜ್ವಾಲೆ ಎಂಬವಳನ್ನು ಕುಂಭಕರ್ಣನಿಗೂ, ಶೈಲೂಷನೆಂಬ ಗಂಧರ್ವ ರಾಜನ ಮಗಳು ಸರಮೆ ಎಂಬವಳನ್ನು ವಿಭೀಷಣನಿಗೂ ನಿಶ್ಚಯಿಸಿ ಒಂದೇ ಕಾಲದಲ್ಲಿ ಇಬ್ಬರ ಮದುವೆಯನ್ನೂ ವೈಭವದಿಂದ ಮಾಡಿದನು. ಹೀಗೆ ಲಂಕಾ ನಗರವು ಇನ್ನಷ್ಟು ಪ್ರಸಿದ್ಧವಾಯಿತು.

ಮೂವರು ಅಣ್ಣ ತಮ್ಮಂದಿರೂ ತಮ್ಮ ತಮ್ಮ ಹೆಂಡತಿಯರೊಂದಿಗೆ ಸುಖವಾಗಿ ಸಂಸಾರ ನಡೆಸಿಕೊಂಡಿರುವಾಗ, ರಾವಣನ ಹೆಂಡತಿ ಮಂದೋದರಿ ಮೇಘನಾದನನ್ನು ಹೆತ್ತಳು. ಅವನು ಭೂಮಿಯ ಮೇಲೆ ಬಿದ್ದಕೂಡಲೇ ಆಕಾಶವು ಗುಡುಗಿದಂತೆ ಅತ್ತನಂತೆ. ಆದುದರಿಂದ ಅವನಿಗೆ ಮೇಘನಾದನೆಂದು ಹೆಸರಿಟ್ಟಿದ್ದಾರೆ. ಆ ಹುಡುಗನ ಮೇಲೆ ತಂದೆ ತಾಯಿಗಳಿಗೆ ಅಪರಿಮಿತ ಪ್ರೀತಿ. ಅವನ ಮೇಲೆಯೇ ರಾವಣನ ನಂಬುಗೆ ಪೂರ್ಣವಾಗಿತ್ತು. ಅವನನ್ನು ರಾವಣನಿಗಿಂತಲೂ ಹೆಚ್ಚಿನವನೆನ್ನಬಹುದು. ಆ ಮೇಘನಾದನೇ ಲಕ್ಷ್ಮಣನ ಕೈಯಲ್ಲಿ ಸತ್ತುಹೋದ ಇಂದ್ರಜಿತ್ತು.

ಒಂದುಸಾರಿ ರಾವಣನು ಒಡ್ಡೋಲಗ ನಡೆಸಿಕೊಂಡಿದ್ದಾಗ ಕುಂಭಕರ್ಣನು ಬ್ರಹ್ಮಾಂಡದಂತೆ



ಆಕಳಿಸಿ, ಜಡಭಾರವನ್ನು ತಾಳಲಾಗದೆ ಮೈಕೈ ಮುರಿದುಕೊಳ್ಳುತ್ತಾ, "ಅಣ್ಣಾ, ನಿದ್ರೆ ಒತ್ತೊತ್ತಿ ಬರುತ್ತಾ ಇದೆ. ನಾನು ಸುಖವಾಗಿ ನಿದ್ದೆಮಾಡಲು ಏನಾದರೂ ಏರ್ಪಾಡು ಮಾಡಿಕೊಡು" ಎಂದು ಕೇಳಿಕೊಂಡನು.

ಅದು ಸಾಧಾರಣ ನಿದ್ರೆಯಲ್ಲ. ಬ್ರಹ್ಮನು ಕೊಟ್ಟ ವರದಿಂದ ಆಕ್ರಮಿಸಿಕೊಂಡ ದೀರ್ಘಕಾಲದ ನಿದ್ರೆಯಾಗಿತ್ತು.

ರಾವಣನು ಪ್ರಿಯ ತಮ್ಮನಾದ ಕುಂಭಕರ್ಣನಿಗಾಗಿ ಅದ್ಭುತವಾದೊಂದು ನಿದ್ರಾ ಮಂದಿರವನ್ನು ಕಟ್ಟಿಸಿಕೊಟ್ಟನು. ಅದು ತುಂಬಾ ಅಗಲವಾಗಿ, ಅದಕ್ಕಿಂತ ಎರಡು ಪಾಲು ಹೆಚ್ಚು ಉದ್ದವಾಗಿ ಸ್ಫಟಿಕಶಿಲಾ ಸ್ತಂಭಗಳಿಂದ, ದಂತಗಳ ದ್ವಾರ ತೋರಣಗಳಿಂದ, ಬಂಗಾರದ ದ್ವಾರ ಬಂಧಗಳಿಂದ, ಮಣಿ ಮಾಣಿಕ್ಯಗಳನ್ನು ಹೊದುಗಿಸಿದ ಗೋಡೆಗಳಿಂದ ಸೊಗಸಾದ ಅಲಂಕಾರ ಮಂದಿರವೇ ಆಗಿತ್ತು.



ಕುಂಭಕರ್ಣನು ಅಲ್ಲಿ ಮಲಗಿಕೊಂಡು ವರ್ಷಗಟ್ಟಲೆ ನಿದ್ರೆ ಮಾಡಿಕೊಂಡಿರತೊಡಗಿದನು. ನಿದ್ರಾ ಸುಖವನ್ನು ಪೂರ್ಣವಾಗಿ ಅನುಭವಿಸಿಕೊಂಡಿದ್ದನು.

ಒಂದುಕಡೆ ಕುಂಭಕರ್ಣನು ಹಾಗೆ ಮಲಗಿ ನಿದ್ದೆಯಲ್ಲಿ ಮುಳುಗಿರುವಾಗ, ರಾವಣನು ತನ್ನ ಅಸಾಧಾರಣವಾದ ಬಲಗಳನ್ನು ಹೊಂದಿಸಿಕೊಂಡು ದಿಗ್ವಿಜಯ ಮಾಡುತ್ತ, ದೇವತೆಗಳನ್ನೂ, ಮುನಿಗಳನ್ನೂ, ಯಕ್ಷರನ್ನೂ, ಗಂಧರ್ವರನ್ನೂ ಯಥೇಚ್ಛೆಯಾಗಿ ಪೀಡಿಸತೊಡಗಿದನು. ಮದಿಸಿದ ಆನೆ ನೀರಿನೊಳಗೆ ಪ್ರವೇಶಿಸಿ, ಕೆದಕಾಡಿದ ಹಾಗೆ ರಾವಣನು ದೇವತೆಗಳ ನಂದನೋದ್ಯಾನ ಮೊದಲಾದುವನ್ನು ಧ್ವಂಸ ಮಾಡಿದನು. ಅವನನ್ನು ತಡೆಯುವವರೇ ಇಲ್ಲದೇ ಹೋದರು.

ತನ್ನ ತಮ್ಮನು ಮಾಡುವ ಕೆಲಸಗಳನ್ನು ನೋಡಿ ಕುಬೇರನು ಬಹಳವಾಗಿ ನೊಂದುಕೊಂಡು, ತನ್ನ ವಂಶಗೌರವಕ್ಕೆ ಸಲ್ಲದ ದುಷ್ಟತನಗಳನ್ನು ಬಿಡುವಂತೆ ಬೋಧನೆ ಮಾಡಬೇಕೆಂದುಕೊಂಡು ರಾವಣನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು. ಆ ದೂತನು ಲಂಕೆಗೆ ಬಂದು ಮೊದಲು ವಿಭೀಷಣನನ್ನು ನೋಡಿದನು. ವಿಭೀಷಣನು ಆ ದೂತನಿಗೆ ತಕ್ಕ ಗೌರವ ಮರ್ಯಾದೆಗಳನ್ನು ಮಾಡಿ, ಕುಬೇರನ ಕ್ಷೇಮ ಸಮಾಚಾರಗಳನ್ನು ಕೇಳಿ ತಿಳಿದು, ಅವನು ಬಂದ ಕೆಲಸವೇನೆಂದು ವಿಚಾರಿಸಿದನು.

ದೂತನು ಹೇಳಿದುದನ್ನು ಕೇಳಿ, ವಿಭೀಷಣನು ಅವನನ್ನು ರಾವಣನ ಬಳಿಗೆ ಕರೆದುಕೊಂಡು ಹೋದನು.

ರಾವಣನಿಗೆ ಕುಬೇರನು ಕಳುಹಿಸಿದ ಮಾತುಗಳೇನೆಂದರೆ, "ತಮ್ಮಾ ರಾವಣಾ, ಈಗಾಗಲೇ ನಿನಗೆ ದೊಡ್ಡ ಕೀರ್ತಿ ಬಂದಿದೆ. ಅಷ್ಟಕ್ಕೇ ತೃಪ್ತನಾಗಿ ಇನ್ನು ಮೇಲೆ ಸಾಧ್ಯವಾದಷ್ಟು ಸಾಧು ಮಾರ್ಗದಲ್ಲಿ ನಡೆಯುವುದು ಒಳ್ಳೆಯದು. ನೀನು ಧ್ವಂಸ ಮಾಡಿದ ನಂದನವನ್ನು ನಾನು ಕಣ್ಣಾರೆ ನೋಡಿದ್ದೇನೆ. ಋಷಿಗಳನ್ನು ಕೊಂದಿರುವುದಾಗಿ ಕೇಳಿದ್ದೇನೆ. ನಿನ್ನಿಂದ ಪೀಡಿಸಲ್ಪಟ್ಟ ದೇವತೆಗಳು ನಿನ್ನ ಮೇಲೆ ಹಗೆ ತೀರಿಸಿಕೊಳ್ಳುವ ಪ್ರಯತ್ನದಲ್ಲಿದ್ದಾರೆಂದು ತಿಳಿದು ಬಂದಿದೆ. ನಾನು ಈ ನಡುವೆ ರೌದ್ರ ವ್ರತವನ್ನು ನಿಯಮಿತವಾಗಿ ಮಾಡಲೆಳಸಿ ಹಿಮಾಲಯಕ್ಕೆ ಹೋಗಿ ಅಲ್ಲಿ ಶಿವನೊಂದಿಗೆ ಇದ್ದ ಪಾರ್ವತೀದೇವಿಯನ್ನು ನೋಡಿದೆನು. ಯಾವ ಉದ್ದೇಶವೂ ಇಲ್ಲದೆಯೇ ಪಾರ್ವತಿಯ ಸೌಂದರ್ಯಕ್ಕೆ ಬಂದಿಯಾಗಿ ನನ್ನ ಎಡದ ಕಣ್ಣು ಅವಳ ಮೇಲೆ ಬಿತ್ತು. ಕೂಡಲೇ ನನ್ನ ಕಣ್ಣು ಸುಟ್ಟು ಪಿಂಗಳ ವರ್ಣವಾಯಿತು. ಆಮೇಲೆ ನಾನು ಅಪಾರವಾದ ಆ ಪರ್ವತದ ಮೇಲೆ ಮತ್ತೊಂದು ಕಡೆಗೆ ಹೋಗಿ ರೌದ್ರ ವ್ರತವನ್ನು ಅವಲಂಬಿಸಿದೆನು. ನಿಯಮದಂತೆ ಆ ವ್ರತವು ಪೂರ್ತಿಯಾದ ಮೇಲೆ, ಈಶ್ವರನು ಮೆಚ್ಚಿ, ತಾನು ಒಂದು ಕಾಲದಲ್ಲಿ ಈ ವ್ರತವನ್ನು

ಮಾಡಿದ್ದೇನೆಂದೂ. ಅನಂತರ ಆ ವ್ರತವನ್ನು ಮಾಡಿದವನು ನೀನೇ ಎಂದೂ ಹೇಳಿ, ನನ್ನನ್ನು ತನ್ನ ಸ್ನೇಹಿತನಾಗಿರಬೇಕೆಂದು ಹೇಳಿದನು. ಶಿವನು ನನಗೆ ಏಕಾಕ್ಷೀ ಪಿಂಗಳನೆಂಬ ಹೆಸರನ್ನೂ ಕೊಟ್ಟನು. ಶಿವನಿಂದ ಅಪ್ಪಣೆ ಪಡೆದು ನನ್ನ ಮನೆಗೆ ಹಿಂದಿರುಗಿದಾಗ ನೀನು ಮಾಡಿದ ದುಷ್ಕೃತ್ಯಗಳ ಮಾತುಗಳು ಕಿವಿಗೆ ಬಿದ್ದುವು. ವಂಶಕ್ಕೆ ಕೆಟ್ಟ ಹೆಸರು ತರುವ ಅಂಥಾ ಹೇಯ ಕಾರ್ಯಗಳನ್ನು ಬಿಟ್ಟುಬಿಡು. ಅಪ್ಪಾ ರಾವಣಾ, ಮುನಿಗಳೂ ದೇವತೆಗಳೂ ಸೇರಿ ನಿನ್ನ ಮರಣಕ್ಕೆ ಉಪಾಯ ಹುಡುಕುತ್ತಿದ್ದಾರೆಂದು ಗೊತ್ತಾಗಿದೆ. ಆದುದರಿಂದಲೇ ನಿನಗೆ ಹೀಗೆ ಎಚ್ಚರಿಕೆ ಹೇಳಬೇಕಾಯಿತು."

ದೂತನು ಈ ರೀತಿಯಾಗಿ ಕುಬೇರನ ಮಾತುಗಳನ್ನು ರಾವಣನ ಮುಂದೆ ಹೇಳಲು, ರಾವಣನು ಕೋಪಾವೇಶದಲ್ಲಿ "ಎಲೋ ದೂತಾ! ಈ ಮಾತುಗಳನ್ನು ಹೇಳಿದ ನಿನ್ನನ್ನೂ, ಹೇಳಿಸಿದ ನನ್ನಣ್ಣನನ್ನೂ ಏನು ಮಾಡುತ್ತೇನೆಂದು ನೋಡು. ಕುಬೇರನು ನನಗೆ ಹಿತಬೋಧೆ ಮಾಡುವಷ್ಟರ ಮಟ್ಟಿಗೆ ಇದ್ದಾನೇನು? ತನಗೆ ಶಿವನ ಸ್ನೇಹ ದೊರಕಿತೆಂದು ನನಗೆ ಹೇಳುವನೇ? ದೊಡ್ಡವನೂ, ತಂದೆಗೆ ಸಮಾನನೂ ಎಂದುಕೊಂಡು ಇಷ್ಟರವರೆಗೆ ಕೊಲ್ಲದೆ ಬಿಟ್ಟಿದ್ದೇನೆ. ನಿನ್ನ ಮಾತುಗಳನ್ನು ಕೇಳಿದ ಮೇಲೆ ಮೂರು ಲೋಕಗಳನ್ನೂ ಜಯಿಸಬೇಕೆಂದು ತೋರುತ್ತಿದೆ. ನನ್ನ ಅಣ್ಣನ ಕಾರಣದಿಂದ, ಉಳಿದ ದಿಕ್ಪಾಲಕರನ್ನು ಕೂಡಾ ನಾಶಮಾಡಿಬಿಡುತ್ತೇನೆ" ಎನ್ನುತ್ತ ಕುಬೇರನ ದೂತನನ್ನು ಕತ್ತಿಯಿಂದ ಕಡಿದು ರಾಕ್ಷಸರಿಗೆ ತಿನ್ನುವಂತೆ ಹೇಳಿ ಪ್ರಯಾಣಕ್ಕೆ ಸನ್ನಾಹ ಮಾಡಿದನು. ಹೀಗೆ ರಾವಣನು ರಥವನ್ನೇರಿ ಮೂರು ಲೋಕಗಳನ್ನೂ ಜಯಿಸಲು ಹೊರಟನು.

ಅವನು ಮೊತ್ತಮೊದಲು ಕುಬೇರನ ಮೇಲೆಯೇ ದಾಳಿ ಮಾಡಲು ನಿಶ್ಚಯಿಸಿ, ಮಹೋದರ, ಪ್ರಹಸ್ತ,



ಮಾರೀಚ, ಶುಕ, ಸಾರಣ, ಧೂಮ್ರಾಕ್ಷ ಎಂಬ ಮಹಾ ಶೂರರಾದ ಆರು ಮಂತ್ರಿಗಳೊಂದಿಗೆ ಹೊರಟು ಬೇಗದಲ್ಲೇ ನದಿಗಳನ್ನೂ, ಬೆಟ್ಟಗಳನ್ನೂ, ವನಗಳನ್ನೂ ದಾಟಿ ಕೈಲಾಸ ಪರ್ವತವನ್ನು ತಲುಪಿದನು. ಅಲ್ಲಿ ರಾವಣನೂ ಅವನ ಅನುಚರರೂ ಕುಳಿತುಕೊಂಡಿರುವುದನ್ನು ನೋಡಿ, ಹೀಗೆ ಬಂದವನು ಕುಬೇರನ ತಮ್ಮನೆಂದು ತಿಳಿದು ಯಕ್ಷರು ಭಯಪಡುತ್ತ ಓಡಿಹೋಗಿ ಕುಬೇರನೊಂದಿಗೆ ಆ ಸಂಗತಿ ಹೇಳಿದರು.

ಕೂಡಲೇ ಕುಬೇರನು ತನ್ನ ಯಕ್ಷರನ್ನು ರಾವಣನ ಮೇಲೆ ಕಳುಹಿಸುತ್ತ ಯುದ್ಧಮಾಡಲು ಅಪ್ಪಣೆ ಕೊಟ್ಟನು. ಅಸಂಖ್ಯಾಕರಾದ ಯಕ್ಷರು ಬಂದು ರಾವಣನನ್ನೂ, ಅವನ ಮಂತ್ರಿಗಳನ್ನೂ ಮುತ್ತಿ ಯುದ್ಧ ಪ್ರಾರಂಭ ಮಾಡಿದರು. ರಾವಣನ ಪ್ರತಿಯೊಬ್ಬ ಮಂತ್ರಿಯೂ ಸಾವಿರ ಸಾವಿರ ಮಂದಿ ಯಕ್ಷರೊಂದಿಗೆ ಯುದ್ಧ ಮಾಡಿದರು. ರಾವಣನು

ಒಣಹುಲ್ಲನ್ನು ಅಗ್ನಿ ದಹಿಸಿದಂತೆ ಯಕ್ಷರನ್ನೆಲ್ಲಾ ನಿರ್ಮೂಲ ಮಾಡಿಬಿಟ್ಟನು. ಈ ಯುದ್ಧದಲ್ಲಿ ಸತ್ತ ಯಕ್ಷರನ್ನುಳಿದವರು ಯುದ್ಧರಂಗದಿಂದ ಓಡಿ ಹೋದರು.

ಈ ಸಂಗತಿಯನ್ನು ಕೇಳಿ ಕುಬೇರನು ಮತ್ತೆ ಕೆಲವು ಸಾವಿರ ಮಂದಿ ಯಕ್ಷರನ್ನು ರಾವಣನ ಮೇಲೆ ಕಳುಹಿಸಿದನು. ಅವರಲ್ಲಿ ಸಂಯೋಧಕಂಟಕ ನೆಂಬವನು ಮಾರೀಚನ ಮೇಲೆ ಚಕ್ರಾಯುಧವನ್ನು ಪ್ರಯೋಗಿಸಿ ಬೆಟ್ಟದಿಂದ ಕೆಳಗೆ ಬೀಳುವಂತೆ ಹೊಡೆದನು. ಮಾರೀಚನು ಮತ್ತೆ ಎದ್ದು ಯುದ್ಧಕ್ಕೆ ಬರುವುದರೊಳಗೆ ಆ ಯಕ್ಷನು ಓಡಿಹೋದನು.

ಹಾಗೆಯೇ ಅಲಕಾ ನಗರದೊಳಗೆ ಪ್ರವೇಶಿಸದೆ ಅಡ್ಡವಾಗಿ ಓಡುತ್ತಿದ್ದ ಒಬ್ಬ ಯಕ್ಷನನ್ನು ರಾವಣನು ತೋರಣವನ್ನೆಳೆದು ಹೊಡೆದು ಕೊಂದುಬಿಟ್ಟನು. ಆಮೇಲೆ ಯಕ್ಷರೆಲ್ಲಾ ರಣರಂಗದಿಂದ ಹೆದರಿ ಓಡಿ ನದಿಗಳಲ್ಲಿಯೂ, ಗುಹೆಗಳಲ್ಲಿಯೂ ಅಡಗಿಕೊಂಡರು.

ತಾನು ಎರಡನೇ ಸಾರಿ ಕಳುಹಿಸಿದ ಯಕ್ಷರು ಕೂಡಾ ಸೋತುಹೋದ ಮೇಲೆ ಕುಬೇರನು ಮಾಣಿ ಭದ್ರನೆಂಬ ಮಹಾ ಯಕ್ಷನನ್ನು ರಾಕ್ಷಸರ ಮೇಲೆ ಕಳುಹಿಸಿದನು.

ಮಾಣಿಭದ್ರನು ನಾಲ್ಕು ಸಾವಿರ ಮಂದಿ ಯಕ್ಷ ರೊಂದಿಗೆ ಹೋಗಿ ಯುದ್ಧ ಮಾಡಿದನು. ಅವರೆಲ್ಲರೂ ಅನೇಕ ಆಯುಧಗಳಿಂದ ಎಡೆಬಿಡದೆ ಹೊಡೆಯುವಾಗ ರಾಕ್ಷಸರು ತಾಳಲಾರದೆ ಓಡ ತೊಡಗಿದರು. ಸ್ವಲ್ಪ ಹೊತ್ತು ಉಭಯ ಪಕ್ಷಗಳಿಗೂ ದೊಡ್ಡ ದೊಂಬಿಯುದ್ಧ ನಡೆಯಿತು. ಆ ದೊಂಬಿ ಯುದ್ಧದಲ್ಲಿ ಪ್ರಹಸ್ತನು ಸಾವಿರ ಮಂದಿ ಯಕ್ಷರನ್ನೂ, ಮಹೋದರನು ಮತ್ತೊಂದು ಸಾವಿರ ಯಕ್ಷರನ್ನೂ, ಮಾರೀಚನು ಎರಡು ಸಾವಿರ ಮಂದಿ ಯಕ್ಷರನ್ನೂ ಸಂಹರಿಸಿದರು. ಮಾಯೆ ತಿಳಿಯದ ಯಕ್ಷರು ರಾಕ್ಷಸರ ಮುಂದೆ ಹೇಗೆ ನಿಂತಾರು ?

ಆದರೂ ಮಾಣಿಭದ್ರನು ಭಾರಿ ದೊಡ್ಡ ಯುದ್ಧ ಮಾಡಿದನು. ಧೂಮ್ರಾಕ್ಷನು ಅವನನ್ನು ಮುಸಲಾಯುಧದಿಂದ ಎದೆಗೆ ಹೊಡೆದನು. ಆದರೂ ಮಾಣಿಭದ್ರನು ಚಲಿಸದೆ ತನ್ನ ಗದೆಯನ್ನು ಗಿರಗಿರ ತಿರುಗಿಸಿ ಹೊಡೆದಾಗ ಧೂಮ್ರಾಕ್ಷನು ಬಿದ್ದು ನೆಲ ಕಚ್ಚಿದನು. ಅದನ್ನು ನೋಡಿ ರಾವಣನೇ ಮಾಣಿ ಭದ್ರನ ಮೇಲೆ ಬಂದನು. ಮಾಣಿಭದ್ರನು ರಾವಣನ ಮೇಲೆ ಮೂರು ಶಕ್ತ್ಯಾಯುಧಗಳನ್ನು ಒಂದರ ಮೇಲೊಂದಾಗಿ ಪ್ರಯೋಗಿಸಲು, ರಾವಣನು ಲಕ್ಷ್ಯ ಮಾಡದೆ ಮಾಣಿಭದ್ರನ ನೆತ್ತಿಯ ಮೇಲೆ ಹೊಡೆದನು. ಆ ಪೆಟ್ಟಿಗೆ ಮಾಣಿಭದ್ರನ ಕಿರೀಟವು ಒಂದು ಬದಿಗೆ ಜಾರಿ ಹೋಯಿತು. ಅದರಿಂದ ಅವನಿಗೆ ಪಾರ್ಶ್ವ ಮೌಳಿ ಎಂಬ ಹೆಸರು ಬಂತು.






ಕುಬೇರನು ತನ್ನ ಜತೆಯಲ್ಲಿ ಶುಕ್ರ ಮತ್ತು ಪ್ರೋಷ್ಠಪದರೆಂಬ ಇಬ್ಬರು ಮುಖ್ಯಮಂತ್ರಿಗಳನ್ನು ಕರೆದುಕೊಂಡು ರಾವಣನ ಬಳಿಗೆ ಬಂದು, "ಎಲೋ ದುಷ್ಟನೇ! ದುರ್ವಿದಗ್ಧನೇ! ನಾನು ಎಷ್ಟು ಹೇಳಿದರೂ ನಿನ್ನ ಕಿವಿಗೆ ಏರಲಿಲ್ಲ. ಅಜ್ಞಾನದಿಂದ ತಿಳಿಯದೆ ವಿಷವನ್ನು ಕುಡಿದವನಿಗೆ ಅದರ ದುಷ್ಫಲಿತ ಅನುಭವಕ್ಕೆ ಬಂದಾಗ ಮಾತ್ರವೇ ಜ್ಞಾನ ಬರುತ್ತದೆ. ಅದು ನಿಷ್ಪ್ರಯೋಜಕವಾದ ಜ್ಞಾನ. ನಿನ್ನ ಅಜ್ಞಾನವು ನಿನಗೆ ತಿಳಿಯುವುದಿಲ್ಲ. ನಿನಗೆ ಅಧೋಗತಿ ಬರಬಾರದೆಂತಲೇ ಇಷ್ಟೆಲ್ಲಾ ಹೇಳುತ್ತಿದ್ದೇನೆ. ಆದರೂ ನಿನಗೆ ಗೊತ್ತಾಗುವುದಿಲ್ಲ. ನೀನು ಇಷ್ಟೆಲ್ಲಾ ಕಲಿತು ಸಾಧಿಸಿ ಏನು ಪ್ರಯೋಜನ? ನರಕಬಾಧೆಯನ್ನು ಅನುಭವಿಸುವಾಗ ತಿಳಿದುಕೊಳ್ಳುವಿ. ನಿನ್ನೊಡನೆ ಮಾತಾಡುವುದು ವೃಥಾ ಸಮಯ ಹಾಳು" ಎಂದು ನಿಂದಿಸಿದನು.

ಅದರಿಂದ ರಾವಣನು ಇನ್ನಿಷ್ಟು ಕೆರಳಿ ಕೆಂಡವಾದನು. ಅಣ್ಣನೆಂದು ನೋಡದೆ ಮುಷ್ಟಿಬಿಗಿದು ನಿಂತನು. ಅಣ್ಣತಮ್ಮಂದಿರೊಳಗೆ ದ್ವಂದ್ವ ಯುದ್ಧವು ನಡೆಯಿತು. ಕುಬೇರನು ಪ್ರಯೋಗಿಸಿದ ಅಸ್ತ್ರಗಳೆಲ್ಲವನ್ನೂ ರಾವಣನು ಪ್ರತ್ಯಸ್ತ್ರಗಳಿಂದ ಪರಿಹರಿಸಿ, ಮಾಯಾ ಯುದ್ಧಕ್ಕೆ ತೊಡಗಿದನು. ಕುಬೇರನಿಗೆ ಅನೇಕ ಬಗೆಯ ರೂಪಗಳು ಕಾಣಬಂದುವು. ಎಲ್ಲಿಯೂ ರಾವಣನ ರೂಪ ಮಾತ್ರ ಕಾಣಲೇ ಇಲ್ಲ. ಆ ಸಮಯದಲ್ಲಿ ರಾವಣನು ಅಧರ್ಮ ರೀತಿಯಲ್ಲಿ ಕುಬೇರನ ತಲೆಯ ಮೇಲೆ ಗದೆಯಿಂದ ಹೊಡೆದು ನೆಲಕ್ಕೆ ಬೀಳಿಸಿಬಿಟ್ಟನು. ರಕ್ತ ಸುರಿಸುತ್ತಾ ಬಿದ್ದ ಕುಬೇರನನ್ನು ನಿಧಿಗಳ ಅಧಿದೇವತೆಗಳು ನಂದನವನಕ್ಕೆ ಎತ್ತಿಕೊಂಡು ಹೋಗಿ ಚಿಕಿತ್ಸೆ ಮಾಡಿದರು.

ಹೀಗೆ ರಾವಣನು ಕುಬೇರನ ಮೇಲೆ ವಿಜಯವನ್ನು ಸಾಧಿಸಿ, ಪುಷ್ಪಕ ವಿಮಾನವನ್ನು ತೆಗೆದುಕೊಂಡು, ಅದರಲ್ಲಿ ಏರಿ ಕುಳಿತು ಹಾರಿಸುತ್ತಾ ಶರವಣಕ್ಕೆ ಹೋದನು. ಹೀಗೆ ಪುಷ್ಪಕವನ್ನು ತಾನು ಗೆದ್ದುಕೊಂಡೆನೆಂದು ನಂಬಿ ಹೆಚ್ಚಳಿಸಿಕೊಂಡನು.

## ೪. ವೇದವತಿಯ ಪ್ರತಿಜ್ಞೆ



ಗರ್ವಿಷ್ಠನೊಂದಿಗೆ ವಿವಾದ ಬೇಡವೆಂದು ಕುಬೇರನೂ ಸುಮ್ಮನಾದನು.

ರಾವಣನು ಪುಷ್ಪಕ ವಿಮಾನದಲ್ಲಿ ಸಂತೋಷದಿಂದ ಸಾಗುತ್ತಿರಲು, ಶರವಣ ಪರ್ವತವು ಬಂಗಾರದ ರಂಗಿನಿಂದ ಹೊಳೆಯುತ್ತ ಎರಡನೇ ಸೂರ್ಯನ ಹಾಗೆ ಕಾಣುತ್ತಿತ್ತು. ರಾವಣನು ಅದರ ಮೇಲ್ಭಾಗದಲ್ಲಿ ಬರುವಾಗ ಪುಷ್ಪಕ ವಿಮಾನವು ಮುಂದೆ ಸಾಗದೆ ಗಕ್ಕನೆ ನಿಂತುಬಿಟ್ಟಿತು.

ಅದನ್ನು ನೋಡಿ ರಾವಣನು "ಇಚ್ಛಿಸಿದ ಪ್ರಕಾರ ನಡೆಯುವ ಈ ವಿಮಾನವು ಹೀಗೆ ನಿಂತು ಹೋಯಿತೇಕೆ? ಇದೇನಾದರೂ ಕುಬೇರನ ಪಕ್ಷಪಾತಿಯಾಗಿದ್ದೀತೆ?" ಎಂದು ತನ್ನೊಂದಿಗಿದ್ದ ಮಂತ್ರಿಗಳನ್ನು ಕೇಳಿದನು.

ಅಷ್ಟರಲ್ಲಿ ಈಶ್ವರನ ಪಾರ್ಶ್ವಧರನೂ, ಮಹಾಬಲಿಷ್ಠನೂ ಆದ ನಂದಿ ರಾವಣನನ್ನು ಉದ್ದೇಶಿಸಿ ಗಂಭೀರ ಕಂಠದಿಂದ, "ಎಲೋ ದಶಗ್ರೀವಾ! ನಿಲ್ಲಲ್ಲೇ! ಆಚೆಗೆ ಹೋಗು. ಕೂಡಲೇ ಹಿಂದೆ ಹೋಗಿಬಿಡು. ಈ ಪರ್ವತದ ಮೇಲೆ ಶಿವನು ಲೀಲಾಮಗ್ನನಾಗಿದ್ದಾನೆ. ಸುವರ್ಣರೂ, ನಾಗರೂ, ಯಕ್ಷರೂ, ದೈತ್ಯರೂ, ದಾನವರೂ, ರಾಕ್ಷಸರೂ ಯಾವ ಇತರ ಪ್ರಾಣಿಗಳೂ ಈ ಪರ್ವತದ ಮೇಲೆ ಬರಬಾರದು. ಜಾಗ್ರತೆ! ದೂರ ಸುತ್ತಿಕೊಂಡು ಹೋಗು" ಎಂದನು.

ಆ ಮಾತುಗಳನ್ನು ಕೇಳಿದ ಕೂಡಲೇ ರಾವಣನು ಕೋಪಾವೇಶದಿಂದ ಕಂಪಿತನಾಗಿ, "ಯಾರವನು ಮರ್ಯಾದೆ ತಿಳಿಯದ ಶಿವ?" ಎಂದು ಮೂದಲಿಸಿಕೊಳ್ಳುತ್ತ ವಿಮಾನದಿಂದ ಇಳಿದು ಗುಡ್ಡದ ಕೆಳಗೆ ಹೋದನು.

ಅಲ್ಲಿ ಅವನಿಗೆ ಶಿವನೂ, ತುಸು ದೂರದಲ್ಲಿ ಶೂಲ ಹಿಡಿದುಕೊಂಡು ಎರಡನೇ ಶಿವನ ಹಾಗೆ ನಿಂತುಕೊಂಡಿದ್ದ ನಂದೀಶ್ವರನೂ ಕಾಣಿಸಿದರು. ನಂದೀಶ್ವರನ ಕೊಂಬುಗಳ ಮುಖವನ್ನು ನೋಡಿ, "ನೀನೋ ಕೋತೀ ಹಾಗೆ ಎಚ್ಚರಿಸಿದ ಬಂಟ?" ಎಂದು ರಾವಣನು ಮೇಘ ಗರ್ಜನೆಯಂತೆ ಗಡಗಡನೆ ನೆಗಾಡಿದನು.

ಅಪರಶಂಕರನಂತಹ ನಂದಿ ರಾವಣನ ನೆಗುವಿನಿಂದ ಕೋಪಗೊಂಡು, "ಎಲೋ ಗರ್ವಿಷ್ಠನೇ! ನನ್ನ ಮುಖವನ್ನು ನೋಡಿ ಕೋತಿಯೆಂದು ನಗುವ ನಿನ್ನನ್ನೂ ನಿನ್ನ ಕುಲವನ್ನೂ ನನಗೆ ಸಮಾನರಾದ ಶಕ್ತಿಯುಳ್ಳ ವಾನರರು ಕಾಲ ಬಂದಾಗ ತಪ್ಪದೆ ನಿರ್ಮೂಲ ಮಾಡುತ್ತಾರೆಂದು ತಿಳಿ!" ಎಂದು ಶಪಿಸಿದನು.

ರಾವಣನು ನಿರ್ಲಕ್ಷ್ಯವಾಗಿ ಪರ್ವತವನ್ನು ಸಮೀಪಿಸಿ ನಂದಿಯನ್ನು ನೋಡಿ "ನನ್ನ ವಿಮಾನವನ್ನು ತಡೆದ ಈ ಪರ್ವತವನ್ನೇ ಈಗ ಕಿತ್ತುಹಾಕುತ್ತೇನೆ. ನಾನು ಎಂಥವನೆಂದು ಇಲ್ಲಿನವರಿಗೆ ತಿಳಿಯದೆಂದು ತೋರುತ್ತದೆ! ಪಾಪ! ಈಗ ಎಲ್ಲರೂ

ತಿಳಿಯಲಿ!" ಎಂದು ತನ್ನ ಕೈಗಳನ್ನು ಪರ್ವತದ ಕೆಳಗೆ ತೂರಿಸಿ ಪರ್ವತವನ್ನು ಎತ್ತಲು ನೋಡಿದನು. ಪರ್ವತವು ಕದಲಿತು.

ಇದನ್ನೆಲ್ಲ ಗಮನಿಸಿಕೊಂಡಿದ್ದ ಶಿವನು ನಸುಗೋಪದಿಂದ ಮುಗುಳು ನಗುತ್ತ ತನ್ನ ಕಾಲಿನ ಉಂಗುಷ್ಠದಿಂದ ಪರ್ವತವನ್ನು ಒತ್ತಿದನು.

ಆದರಿಂದ ರಾವಣನ ಕೈಗಳು ಪರ್ವತದ ಅಡಿಯಲ್ಲಿ ಸಿಕ್ಕಿಕೊಂಡು ಜಜ್ಜಿದುವು. ಆ ನೋವಿನಿಂದ ರಾವಣನು ಮಹಾ ದಾರುಣವಾಗಿ ಆಕ್ರೋಶ ಮಾಡಿದನು. ರಾವಣನ ಮಂತ್ರಿಗಳು ತಮ್ಮೊಳಗೇ ಪೇಚಾಡುತ್ತ, ರಾವಣನೊಂದಿಗೆ, "ಪ್ರಭೂ! ಶಂಕರನನ್ನು ತೃಪ್ತಿಪಡಿಸು. ಈಗ ಆತನ ಹೊರತು ಬೇರೆ ಗತಿ ಇಲ್ಲ. ಅವನಿಗೇ ಶರಣಾಗತನಾಗು ಪ್ರಭೂ. ಅವನನ್ನು ಧ್ಯಾನಿಸು. ಸ್ತೋತ್ರ ಮಾಡಿ ಮೆಚ್ಚಿಸು ಪ್ರಭೂ" ಎಂದು ಸಲಹೆ ಮಾಡಿದರು.

ರಾವಣನು ನೋವಿನಿಂದ ಅಳುತ್ತಾ, ಶಿವನನ್ನು ಸ್ತೋತ್ರ ಮಾಡಿದನು. ಅದನ್ನು ಕೇಳುತ್ತಾ ಶಿವನ ಕೋಪವು ತಣಿಯಿತು. ಕಡೆಗೆ ಶಿವನು ಕನಿಕರ ಪಟ್ಟು ರಾವಣನ ಕೈಗಳನ್ನು ಪರ್ವತದ ಅಡಿಯಿಂದ ಎಳೆದುಕೊಳ್ಳುವಂತೆ ಮಾಡಿ, "ರಾವಣಾ, ನಿನ್ನ ವೀರತ್ವವೂ ಮದವೂ ಸ್ತೋತ್ರವೂ ಒಂದಕ್ಕೊಂದು ತೂಕ ಸರಿಯಾಗಿವೆ. ಮೆಚ್ಚಿದೆನು. ಸಂತೋಷವಾಯಿತು. ನಿನ್ನ ಕೈಗಳು ಜಜ್ಜಿದಾಗ ನೀನು ಮಾಡಿದ ದಾರುಣವಾದ ಶಬ್ದದಿಂದ ನಿನ್ನ ರಾವಣ ನಾಮವು ಸಾರ್ಥಕವಾಗುವಂತಾಯಿತು. ಈ ಹೆಸರೇ ಸ್ಥಿರವಾಗಿ ಚಿರಕಾಲ ನಿಲ್ಲುವಂತೆ ಮಾಡಿಕೊಂಡಿ. ಇನ್ನು ನೀನು ನಿನ್ನ ಇಷ್ಟ ಬಂದ ಕಡೆಗೆ ಹೋಗು" ಎಂದನು.

ಆಗ ರಾವಣನು, "ಮಹಾದೇವಾ! ನಿನಗೆ ನನ್ನ ಮೇಲೆ ತೃಪ್ತಿಯುಂಟಾದ ಪಕ್ಷದಲ್ಲಿ ನಾನು ಕೇಳುವುದನ್ನು ಅನುಗ್ರಹಿಸು. ನಾನು ಇದುವರೆಗೆ ದೇವತೆಗಳೇ ಮೊದಲಾದವರಿಂದ ಮರಣ ಬಾರದಂತೆ ವರ ಪಡೆದಿದ್ದೇನೆ. ಅಲ್ಪರಾದ ಮಾನವರನ್ನು ನಾನು ಲಕ್ಷಿಸುವುದಿಲ್ಲ. ಬ್ರಹ್ಮದೇವನು ನನಗೆ ದೀರ್ಘಾಯುಷ್ಯ ಕೂಡಾ ಕೊಟ್ಟಿದ್ದಾನೆ. ನಾನು ನಿನ್ನಿಂದ ಇನ್ನಿಷ್ಟು ಹೆಚ್ಚು ಆಯುಷ್ಯವನ್ನೂ, ಒಂದು ಆಯುಧವನ್ನೂ ಬೇಡುತ್ತೇನೆ. ನಿನ್ನ ಅನುಗ್ರಹದ ನೆನಪಿಗಾಗಿ ದಯಮಾಡಿ ಅವುಗಳನ್ನು ಅನುಗ್ರಹಿಸು ಮಹಾದೇವಾ!" ಎಂದು ಎಲ್ಲಾ ಕೈಗಳನ್ನೂ ಮುಗಿದು ಕೇಳಿಕೊಂಡನು.



ಶಿವನು ರಾವಣನಿಗೆ ಆಯುಶ್ಶೇಷವನ್ನೂ, ಚಂದ್ರಹಾಸವೆಂಬ ಖಡ್ಗವನ್ನೂ ಕೊಡುತ್ತ, "ಈ ಖಡ್ಗವನ್ನು ಎಂದಿಗೂ ಅವಮಾನಿಸಕೂಡದು. ಯಾವ ದಿನ ಇದಕ್ಕೆ ಅವಮಾನವಾಗುವುದೋ ಆಗಲೇ ಇದು ನಿನ್ನನ್ನು ಬಿಟ್ಟು ತಿರುಗಿ ನನ್ನ ಬಳಿಗೆ ಬಂದುಬಿಡುತ್ತದೆ. ನೆನಪಿಟ್ಟುಕೋ!" ಎಂದು ಹೇಳಿದನು.



ಈ ಬಗೆಯಾಗಿ ಶಿವನಿಂದ ವರಗಳನ್ನು ಪಡೆದ ರಾವಣನು ತನ್ನ ಪುಷ್ಪಕ ವಿಮಾನದಲ್ಲಿ ಏರಿಕೊಂಡು ಭೂಮಿಯಲ್ಲೆಲ್ಲಾ ಸಂಚರಿಸುತ್ತ, ವೀರರಾದ ರಾಜರನ್ನೆಲ್ಲಾ ಹೆದರಿಸಿ ಕ್ಷೋಭೆಗೊಳಿಸುತ್ತಾ ಹೋದನು. ಪರಾಕ್ರಮಸಂಪನ್ನರಾದ ಕೆಲವರು ಧೈರ್ಯದಿಂದ ಅವನೊಡನೆ ಯುದ್ಧವನ್ನು ಮಾಡಿ ನಾಶವಾದರು. ಬುದ್ಧಿವಂತರಾದವರು ಅವನನ್ನು ಗೆಲ್ಲಲಾರೆವೆಂದು ತಿಳಿದು ಕಾಲವನ್ನು ನಂಬಿಕೊಂಡು, ಸೋಲನ್ನು ಒಪ್ಪಿ, ಅವನು ಹೇಳಿದ ಹಾಗೆ ಕೇಳುವೆವೆಂದು ವಿನಯದಿಂದ ಬಾಗಿಬಿಟ್ಟರು.

ಹಾಗೆ ದಿಗ್ವಿಜಯ ಮಾಡಿಕೊಂಡು ರಾವಣನು ಒಂದು ಸಾರಿ ಹಿಮಾಲಯಕ್ಕೆ ಹೋಗಿ ಅಲ್ಲಿ ದೇವತಾಸ್ತ್ರೀಯಂತೆ ಕಾಣುವ ರೂಪವತಿಯೊಬ್ಬಳನ್ನು ನೋಡಿದನು. ಅವಳು ಮುನಿಗಳ ಹಾಗೆ ಕೃಷ್ಣಾಜಿನವನ್ನೂ, ಜಟಾವಲ್ಕಲಗಳನ್ನೂ ಧರಿಸಿ ತಪಸ್ಸಿನ ದೀಕ್ಷೆಯಲ್ಲಿ ಕುಳಿತುಕೊಂಡಿದ್ದಳು.

ರಾವಣನು ಅವಳನ್ನು ನೋಡುತ್ತಾ, ಅವಳ ಅತಿಶಯವಾದ ಸೌಂದರ್ಯದಿಂದ ಆಕರ್ಷಿತನಾಗಿ, ಮೋಹಪರವಶತೆಯಿಂದ ಅವಳ ಹತ್ತಿರ ಹೋಗಿ, "ಸುಂದರೀ ! ಈ ನವಯೌವನ ಪ್ರಾಯದಲ್ಲಿ ಹೀಗೆ ತಪಸ್ಸು ಮಾಡುವುದುಂಟೆ ? ಏಕೆ ಈ ವೈರಾಗ್ಯ ? ನಿನ್ನ ಈ ಸೌಂದರ್ಯ ರಾಶಿಯನ್ನು ನೋಡಿ ಪುರುಷರು ಸಮ್ಮೋಹಿತರಾಗುತ್ತಾರೆ. ನಿನಗೇಕೆ ಈ ಕಠಿಣ ವ್ರತ ? ಇದನ್ನು ನೋಡಿ ನನಗೆ ಸಹಿಸಲಾಗುವುದಿಲ್ಲ" ಎಂದು ಹೇಳಿದನು.

ಅವಳು ಕಣ್ಣು ಬಿಡಿಸಿ, ರಾವಣನನ್ನು ನೋಡಿ, ತಾನು ಯಾರು ಏನೆಂಬುದನ್ನೆಲ್ಲಾ ಹೇಳಿದಳು :

"ಬೃಹಸ್ಪತಿಯ ಮಗನಾದ ಕುಶಧ್ವಜನೆಂಬವರು ನನ್ನ ತಂದೆ. ನನ್ನ ಹೆಸರು ವೇದವತಿ. ಗಂಧರ್ವರೂ, ಯಕ್ಷರೂ, ರಾಕ್ಷಸರೂ ನನ್ನ ತಂದೆಯ ಬಳಿಗೆ ಬಂದು ನನ್ನನ್ನು ತಮಗೆ ಕೊಟ್ಟು ಮದುವೆ ಮಾಡುವಂತೆ ಕೇಳಿಕೊಂಡರು. ಆದರೆ ನನ್ನ ತಂದೆ ಅವರಾರನ್ನೂ ಒಪ್ಪಲಿಲ್ಲ. ಕಾರಣವೇನೆಂದರೆ, ಅವರಿಗೆ ವಿಷ್ಣುಮೂರ್ತಿಯನ್ನೇ ತನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಅಪೇಕ್ಷೆಯಾಗಿತ್ತು. ಈ ಸಂಗತಿಯನ್ನು ತಿಳಿದು ದಂಡನೆಂಬ ಒಬ್ಬ ರಾಕ್ಷಸನು, ಒಂದು ದಿನ ರಾತ್ರಿ ತಂದೆ ನಿದ್ದೆಯಲ್ಲಿರುವಾಗ ಬಂದು ಅವರನ್ನು ಕೊಂದುಬಿಟ್ಟನು. ನನ್ನ ತಾಯಿ ತಂದೆಯೊಂದಿಗೇ ಸಹಗಮನ ಮಾಡಿದಳು. ನಾನು ನನ್ನ ತಂದೆಯ ಕೋರಿಕೆಯನ್ನು ಪೂರ್ತಿಗೊಳಿಸುವ ಉದ್ದೇಶದಲ್ಲಿ, ವಿಷ್ಣುವನ್ನೇ ನನ್ನ ಪತಿಯೆಂದು ಮನಸ್ಸಿನಲ್ಲಿ ಭಾವಿಸಿ ಅದೇ ಧ್ಯಾನದಲ್ಲಿ ತಪಸ್ಸು ಮಾಡಿಕೊಂಡಿದ್ದೇನೆ. ಇಷ್ಟೇ ನನ್ನ ಸಂಗತಿ. ತಿಳಿಯಿತಷ್ಟೇ ? ಆದುದರಿಂದ ರಾವಣಾ, ಇನ್ನು ಇಲ್ಲಿ ನಿಲ್ಲದೆ ಮಾತಾಡದೆ ಹೊರಟು ಹೋಗಿಬಿಡು."

ಆ ಮಾತುಗಳನ್ನು ಕೇಳಿ ರಾವಣನು ನಗುತ್ತ, ಅವಳ ತೀರ ಹತ್ತಿರಕ್ಕೆ ಹೋಗಿ, "ಬುದ್ಧಿಯಿಲ್ಲದ

ಮುಗ್ಧಬಾಲೇ! ಗರ್ವ ಬೇರೆ ತಲೆಗೇರಿ ನಿನ್ನ ಬುದ್ಧಿ ವಿಕಟವಾಗಿದೆ. ಇಲ್ಲದಿದ್ದರೆ ಜಗದೇಕ ಸುಂದರಿ ಯಾಗಿದ್ದು, ನಿನ್ನ ಯೌವನವನ್ನು ಹೀಗೆ ಹಾಳು ಮಾಡಿಕೊಳ್ಳುವಿಯಾ? ನೋಡಿಲ್ಲಿ, ದಶಗ್ರೀವನಾದ ನಾನು ಲಂಕಾಧೀಶ್ವರನಾಗಿದ್ದೇನೆ. ನೀನು ನನ್ನ ಹೆಂಡತಿಯಾಗಿ ಸಮಸ್ತ ಭೋಗಗಳನ್ನೂ ಅನುಭವಿ ಸುತ್ತ ಸೌಭಾಗ್ಯಶಾಲಿನಿಯಾಗಿರು. ದೀರ್ಘಾಯುಷಿ ಯಾದ ನನ್ನನ್ನು ವರಿಸಿ ದೀರ್ಘ ಸುಮಂಗಲಿ ಯಾಗಿರು. ನಿನ್ನ ಅದೃಷ್ಟ ಇಂದು ಕಣ್ಣು ತೆರೆಯಿತು ಅಂದುಕೋ. ವಿಧಿಯೇ ನಿನ್ನನ್ನು ಉದ್ಧರಿಸಲು ನನ್ನನ್ನು ಕಳುಹಿಸಿದನೆಂದು ನಂಬು" ಎನ್ನುತ್ತಾ ಮುಂದಡಿಯಿಟ್ಟನು.

"ಎಲೋ! ಗರ್ವಿಷ್ಟನೇ! ಯಾವ ಲೋಕ ದಲ್ಲಿರುವಿಯೋ? ನಿನಗೆ ಸ್ವಲ್ಪವಾದರೂ ಬುದ್ಧಿ ಯಿದ್ದರೆ ವಿಷ್ಣುವನ್ನು ಅಲಕ್ಷ್ಯಮಾಡಿ ಮಾತಾಡ ಲಾರೆ!" ಎಂದಳು ವೇದವತಿ.

ಕೂಡಲೇ ರಾವಣನು ಅವಳ ಜುಟ್ಟು ಹಿಡಿದು ಎಳೆದನು. ವೇದವತಿ ಕೋಪಾವೇಶದಿಂದ ತನ್ನ ಕೈಗಳನ್ನು ಕತ್ತಿಗಳ ಹಾಗೆ ಮಾಡಿ ತನ್ನ ಜುಟ್ಟನ್ನು ಕಡಿದುಕೊಂಡಳು. ತನ್ನ ಕೋಪಾಗ್ನಿಯಿಂದ ರಾವಣ ನನ್ನು ದಹಿಸುವಳೋ ಎಂಬಂತೆ ಕಾಣಿಸಿದಳು ವೇದವತಿ.

ಅವಳು ಉರಿಯುವ ಅಗ್ನಿಯ ನಡುವಿ ನಲ್ಲಿ ರಾವಣನನ್ನು ನೋಡಿ, "ನೀಚನೇ! ನಿನ್ನಿಂದ ಅವಮಾನ ಪಟ್ಟು ಇನ್ನು ಬದುಕಿರಲಾರೆ. ಈ ಅಗ್ನಿ ಯಲ್ಲಿ ನನ್ನ ಪಂಚಪ್ರಾಣಗಳನ್ನು ಬಿಟ್ಟು ನಿನ್ನನ್ನು ಕೊಲ್ಲಲು ಅಯೋನಿಜೆಯಾಗಿ, ಪತಿವ್ರತೆಯಾಗಿ ಹುಟ್ಟಿ ತೀರುತ್ತೇನೆ. ನಾನೇ ನಿನ್ನ ಮೃತ್ಯುವೆಂದು ತಿಳಿ!" ಎಂದು ಅಗ್ನಿಯಲ್ಲಿ ಸುಟ್ಟುಹೋದಳು.

ಆ ವೇದವತಿಯೇ ಭೂಮಿಯಲ್ಲಿ ಸೀತೆಯಾಗಿ ಹುಟ್ಟಿ, ಜನಕನ ಮನೆಯಲ್ಲಿ ಬೆಳೆದು ವಿಷ್ಣುವಿನ ಅವತಾರವಾದ ರಾಮಪತ್ನಿಯಾಗಿ ರಾಮನ ಕೈಯಲ್ಲಿ ರಾವಣನನ್ನು ಕೊಲ್ಲಿಸಿದಳು.



ಹೀಗೆ ವೇದವತಿ ಅಗ್ನಿಗೆ ಆಹುತಿಯಾಗಿ ಹೋದ ಮೇಲೆ ರಾವಣನು ಅವಳ ಕೋಪ ಶಾಪಗಳ ನ್ನೇನೂ ಲಕ್ಷ್ಯ ಮಾಡದೆ, ಪುಷ್ಪಕ ವಿಮಾನವನ್ನೇರಿ ಲೋಕ ಸಂಚಾರ ಮಾಡುತ್ತ, ಒಂದು ಕಡೆಯಲ್ಲಿ ಯಾವುದೋ ಮಹಾ ಯಜ್ಞ ನಡೆಯುವುದನ್ನು ನೋಡಿದನು.

ಅದು ಮರುತ್ತ ಮಹಾರಾಜನು ದೇವತೆಗಳನ್ನು ಹತ್ತಿರವಿರಿಸಿಕೊಂಡು ಮಾಡುತ್ತಿರುವ ಯಜ್ಞ. ಬೃಹ ಸ್ಪತಿಯ ತಮ್ಮನಾದ ಸಂವರ್ತನು ಮುಖ್ಯ ಪುರೋಹಿತನಾಗಿ ಯಜ್ಞ ಮಾಡಿಸುತ್ತಿದ್ದನು.

ರಾವಣನನ್ನು ನೋಡಿದ ಕೂಡಲೇ ಅಲ್ಲಿ ಸೇರಿದ್ದ ದಿಕ್ಪಾಲಕರು ಭಯಭ್ರಾಂತರಾಗಿ ತಮ್ಮ ಗುರುತು ತಿಳಿಯದಂತೆ ವೇಷ ಬದಲಾಯಿಸಿಕೊಂಡರು. ಇಂದ್ರನು ನವಿಲಿನ ರೂಪ ತಾಳಿದನು. ಯಮನು



ಕಾಗೆಯಾಗಿ ಮಾರ್ಪಟ್ಟನು. ಕುಬೇರನು ಓತಿಯಾದನು. ವರುಣನು ಹಂಸರೂಪ ತಾಳಿದನು. ಹಾಗೆಯೇ ಉಳಿದ ದೇವತೆಗಳು ಬೇರೆ ಬೇರೆ ಪ್ರಾಣಿಗಳ ಹಾಗೆ ಮಾರ್ಪಟ್ಟರು.

ರಾವಣನು ನಿಃಸಂಕೋಚದಿಂದ ಯಜ್ಞವಾಟಿಕೆಯೊಳಗೆ ಪ್ರವೇಶಿಸಿ ಮರುತ್ತ ರಾಜನನ್ನು ನೋಡಿ, "ಒಂದೇ ಮಾತು. ಈ ರಾವಣನೊಂದಿಗೆ ಯುದ್ಧ ಮಾಡುವಿಯಾ? ಸೋತೆನೆಂದು ಶರಣಾಗುವಿಯಾ? ಬೇಗ ಹೇಳು" ಎಂದು ಕೇಳಿದನು.

"ಎಂಥಾ ರಾವಣ ನೀನು?" ಎಂದು ಮರುತ್ತನು ರಾವಣನನ್ನು ಕೇಳಿದನು.

ರಾವಣನು ದೊಡ್ಡ ದನಿಯಿಂದ ನಾಲ್ಕು ಸುತ್ತಲೂ ಪ್ರತಿಧ್ವನಿಸುವಂತೆ ನಗುತ್ತ, "ಭೇಷ್! ದಶಗ್ರೀವ ರಾವಣನನ್ನು ಕೂಡಾ ನೀನು ಅರಿಯೆಯಾ! ನನ್ನ ಬಲ ಪರಾಕ್ರಮಗಳನ್ನು ತಿಳಿಯದವನು ಮೂರು ಲೋಕಗಳಲ್ಲಿ ಯಾರೂ ಇಲ್ಲವೆಂದುಕೊಂಡಿದ್ದೆ. ನೀನೊಬ್ಬ ಇರುವೆಯೆಂದಾಯಿತು. ನನ್ನ ಅಣ್ಣನನ್ನು ಜಯಿಸಿ ಈ ಪುಷ್ಪಕ ವಿಮಾನ ವಶಪಡಿಸಿಕೊಂಡಿದ್ದೇನೆ! ಈಗಾದರೂ ತಿಳಿಯಿತೇ? ಒಳ್ಳೆಯದರಲ್ಲಿ ಶರಣಾಗು" ಎಂದನು.

ಆ ಮಾತನ್ನು ಕೇಳಿ ಮರುತ್ತ ರಾಜನು ಕೋಪದಿಂದ ಕಿಡಿಕಿಡಿಯಾಗಿ "ತಂದೆಯಂಥ ಅಣ್ಣನನ್ನೇ ಜಯಿಸಿದ ಘನವಂತನೋ ನೀನು? ಬೆಂಕಿಹಚ್ಚಿತು ನಿನ್ನ ಘನವಂತಿಕೆಗೆ! ಛೀ ಛೀ! ಅಂತಹ ದುಷ್ಕೃತ್ಯ ಮಾಡಿದೆನೆಂದು ಗರ್ವಪಡುವಿಯೇನು? ನಿರ್ಲಜ್ಜನೇ! ನಿಲ್ಲು! ನನ್ನ ಬಾಣಗಳಿಂದ ನಿನ್ನ ಪ್ರಾಣ ತೆಗೆಯುತ್ತೇನೆ" ಎಂದು ಹೇಳಿ ಎದ್ದು ಧನುರ್ಬಾಣಗಳನ್ನು ತೆಗೆದುಕೊಂಡನು.

ಆಗ ಮರುತ್ತ ಮಹಾರಾಜನಿಗೆ ಸಂವರ್ತನು ಅಡ್ಡನಿಂತು, "ಅವರಸಪಡಬೇಡ. ನಾನು ಹೇಳುವುದನ್ನು ಸ್ವಲ್ಪ ಕೇಳು. ಈ ಮಹೇಶ್ವರ ಯಜ್ಞದ ಮಧ್ಯದಲ್ಲಿ ವಿಘ್ನ ಉಂಟಾದರೆ ವಂಶನಾಶನವಾಗುತ್ತದೆ. ಯಜ್ಞದೀಕ್ಷೆಯಲ್ಲಿರುವ ನೀನು ಕೋಪಿಸುವುದೂ ಯುದ್ಧಕ್ಕೆ ತಲೆಹಾಕುವುದೂ ಕ್ಷೇಮವಲ್ಲ. ಅಲ್ಲದೆ ಈ ಯುದ್ಧದಲ್ಲಿ ಈ ರಾಕ್ಷಸನನ್ನು ಜಯಿಸಲಾರೆ. ಇವನನ್ನು ಕೊಲ್ಲುವವರಾರೂ ಈಗ ಪ್ರಪಂಚದಲ್ಲಿಲ್ಲ. ಆದುದರಿಂದ ಇವನು ದುರ್ಜಯನು" ಎಂದನು.

ಗುರುವಿನ ಮಾತನ್ನು ಕೇಳಿ ಮರುತ್ತ ರಾಜನು ಧನುರ್ಬಾಣಗಳನ್ನು ಕೆಳಗೆ ಹಾಕಿ, ಮತ್ತೆ ಯಜ್ಞದೀಕ್ಷೆಯಲ್ಲಿ ಕುಳಿತನು. ಅದನ್ನು ನೋಡಿ ರಾವಣನ ಮಂತ್ರಿಯಾದ ಶುಕನು, "ರಾವಣನದೇ ಜಯ!" ಎಂದು ದೊಡ್ಡ ಧ್ವನಿಯಿಂದ ಕೂಗಿದನು.

ರಾವಣನು ಯಜ್ಞವಾಟಿಕೆಯಲ್ಲಿದ್ದ ಕೆಲವು ಋಷಿಗಳನ್ನು ಹಿಡಿದು ಮುರಿದು ಭಕ್ಷಿಸಿ ತೇಗಿ ತೃಪ್ತನಾಗಿ ಅಲ್ಲಿಂದ ತನ್ನ ಪುಷ್ಪಕ ವಿಮಾನವನ್ನೇರಿಕೊಂಡು ಹೊರಟು ಹೋದನು.

ಆಮೇಲೆ ದಿಕ್ಪಾಲಕರು ತಮ್ಮ ತಮ್ಮ ನಿಜ ರೂಪಗಳನ್ನು ಧರಿಸಿ ತಾವು ಯಾವ ಯಾವ ಪ್ರಾಣಿಗಳ ರೂಪಗಳನ್ನು ಧರಿಸಿದರೋ ಅವುಗಳಿಗೆ ಬೇರೆ ಬೇರೆ ವರಗಳನ್ನು ಕೊಟ್ಟರು. ಹಾಗೆಯೇ ಇತರ ದೇವತೆಗಳೂ ಮಾಡಿದರು.

ಅದುವರೆಗೆ ನವಿಲುಗಳು ಕಪ್ಪಗಿದ್ದುವು. ಇಂದ್ರನು ಅವುಗಳಿಗೆ ಅನೇಕ ಬಣ್ಣಗಳ ಚಂದ ಬರುವ ಹಾಗೆ ವರಕೊಟ್ಟನು, ತನ್ನ ಸಾವಿರ ಕಣ್ಣುಗಳೂ ಅವುಗಳ ಪಿಂಛಗಳಿಗೆ ಬರುವ ಹಾಗೆ ಅಲಂಕಾರ ಮಾಡಿ, ಅವುಗಳಿಗೆ ಹಾವುಗಳ ಭಯವಿಲ್ಲದಂತೆ ವರವಿತ್ತನು. ತಾನು ಸುರಿಸುವ ಮಳೆಗೆ ಅವುಗಳು ಸಂತೋಷಿಸುವಂತೆಯೂ ಹರಸಿದನು.

ಹಾಗೆಯೇ ಕಾಗೆಗಳಿಗೆ ಯಾವ ರೋಗವೂ ಇಲ್ಲದಂತೆ, ಹಾಗು ಸಹಜ ಮರಣವಿಲ್ಲದಂತೆ, ಅವುಗಳ ಹೊಟ್ಟೆ ತುಂಬಿದರೆ ತನ್ನ ಲೋಕದಲ್ಲಿರುವ ಪಿತೃದೇವತೆಗಳಿಗೆ ತೃಪ್ತಿಯಾಗುವಂತೆ ಯಮನು ವರವಿತ್ತನು.

ವರುಣನು ಹಂಸಗಳಿಗೆ ನೊರೆಯಂತಹ ದೇಹಕಾಂತಿಯನ್ನೂ, ಜಲಜೀವನವು ಸುಖಪ್ರದವಾಗುವಂತೆಯೂ ವರವಿತ್ತನು. ಕುಬೇರನು ಓತಿಗಳನ್ನು ಬಂಗಾರದ ವರ್ಣದಿಂದ ಶೋಭಿಸುವಂತೆ ಮಾಡಿದನು. ಹೀಗೆ ಅನೇಕ ಪ್ರಾಣಿಗಳಿಗೆ ದೇವತೆಗಳಿಂದ ಉಪಕಾರವಾಯಿತು.

ರಾವಣನು ಲೋಕವನ್ನೆಲ್ಲಾ ತಿರುಗುತ್ತ ಮರುತ್ತ ಮಹಾರಾಜನನ್ನು ಕೇಳಿದ ಹಾಗೆಯೇ ದೊಡ್ಡ ದೊಡ್ಡ ರಾಜರೆಲ್ಲರ ಬಳಿಗೂ ಹೋಗಿ "ನನ್ನೊಂದಿಗೆ ಯುದ್ಧ ಮಾಡುವಿಯಾ? ಸೋತೆನೆಂದು ಶರಣಾಗುವಿಯಾ?" ಎಂದು ಕೇಳುತ್ತಿದ್ದನು. ದುಷ್ಯಂತ, ಸುರಥ, ಗಾಧಿ, ಗಯ, ಪುರೂರವ ಮೊದಲಾದ ರಾಜರೆಲ್ಲಾ ರಾವಣನ ಮುಂದೆ ಸೋತೆವೆಂದು ಒಪ್ಪಿಕೊಂಡರು. ಅಯೋಧ್ಯೆಯನ್ನು ಪಾಲಿಸುತ್ತಿದ್ದ



ಅನರಣ್ಯ ಮಹಾರಾಜನು ಮಾತ್ರ ಧೈರ್ಯದಿಂದ ರಾವಣನನ್ನು ಯುದ್ಧಕ್ಕೆ ಕರೆದನು.

ಆಗ ನಡೆದ ಯುದ್ಧದಲ್ಲಿ ಅನರಣ್ಯನ ಸೇನೆಗಳು ಕಾಡುಗಿಚ್ಚಿನಲ್ಲಿ ತಗಣೆಗಳು ಸತ್ತ ಹಾಗೆ ಸತ್ತು ಹೋದವು. ದ್ವಂದ್ವ ಯುದ್ಧದಲ್ಲಿ ಅನರಣ್ಯನ ಬಾಣಗಳು ರಾವಣನನ್ನು ಏನೂ ಮಾಡಲಾರದೆ ವ್ಯರ್ಥವಾದುವು. ರಾವಣನು ಅನರಣ್ಯನ ನೆತ್ತಿಗೊಂದು ಏಟು ಹಾಕಲು ಅವನು ರಥದಿಂದ ಕೆಳಗುರುಳಿ ಬಿದ್ದನು. ಅವನು ಪ್ರಾಣಬಿಡುತ್ತಾ ತನ್ನ ಇಕ್ಷ್ವಾಕು ವಂಶದಲ್ಲಿ ಹುಟ್ಟಲಿರುವವನ ಕೈಯಲ್ಲೇ ರಾವಣನು ಸಾಯುವಂತಾಗಲೆಂದು ಶಪಿಸಿದನು.

ಈ ಚಂದದಲ್ಲಿ ರಾವಣನು ಗಗನ ವಿಹಾರ ಮಾಡುತ್ತ, ಮಾನವ ಜಾತಿಯನ್ನು ತುಂಬಾ ಭಯಪಡಿಸುತ್ತ ತಿರುಗಿಕೊಂಡಿರುವಾಗ ಒಂದು ದಿನ ಅವನ ಪುಷ್ಪಕಕ್ಕೆ ಇದಿರಾಗಿ ನಾರದನು ಮೋಡಗಳ ಮೇಲಿಂದಾಗಿ ಬಂದು ನಿಂತನು.

"ಏನು ನಾರದಾ ?" ಎಂದು ರಾವಣನು ಅವನನ್ನು ಕೇಳಲು, ನಾರದನು, "ಅಪ್ಪಾ, ರಾವಣಾ, ನಿನ್ನ ಬಲಪರಾಕ್ರಮಗಳನ್ನು ನೋಡಿ ಬಹಳ ಸಂತೋಷಿಸುತ್ತೇನಪ್ಪಾ ! ಆದರೆ ಒಂದು ಮಾತ್ರ ನನಗೆ ಹಿಡಿಸಲಿಲ್ಲ. ದೇವತೆಗಳಿಂದ ಕೂಡಾ ಮರಣ ವಿಲ್ಲದಂತೆ ವರಪಡೆದ ನೀನು ಅಲ್ಪ ಜೀವಿಗಳಾದ ಮಾನವರ ಮೇಲೆ ಬಲ ಪರಾಕ್ರಮಗಳನ್ನು ತೋರಿಸುವುದೆಂದರೇನು ? ಮಾನವರು ಅನೇಕ ವ್ಯಸನಗಳಿಂದ, ರೋಗಗಳಿಂದ, ಕ್ಷಣ ಮಾತ್ರದಲ್ಲಿ ಸತ್ತು ಬೀಳುವ ವಾರ್ಧಕ್ಯದಿಂದ ಬಗೆಬಗೆಯ ಕಷ್ಟ ಗಳನ್ನು ಅನುಭವಿಸಿಕೊಂಡಿರುವವರಾಯಿತಷ್ಟೆ ? ಅವರನ್ನೆಲ್ಲ ಯಮನು ಕೊಲ್ಲುತ್ತಲೇ ಇರುತ್ತಾನೆ. ನೀನು ಯಮನೊಂದಿಗೇ ಯುದ್ಧಮಾಡಿ ಅವನನ್ನು ಕೊಂದುಬಿಡು. ಆ ಒಬ್ಬ ಯಮನನ್ನು ಕೊಂದು ಬಿಟ್ಟರೆ ಪರಲೋಕಗಳನ್ನೆಲ್ಲಾ ಜಯಿಸಿದ ಹಾಗೇ ಆಗಿಬಿಡುತ್ತದೆ !" ಎಂದು ಹೇಳಿದನು.

"ಅಯ್ಯಾ ನಾರದಾ, ನಾನು ಮೊದಲು ಸೌರಾ ಕಾಶವನ್ನೂ, ಅನಂತರ ಸ್ವರ್ಗವನ್ನೂ ಜಯಿಸಿ, ಮೂರು ಲೋಕಗಳನ್ನೂ ಸ್ವಾಧೀನಪಡಿಸಿಕೊಂಡು, ಅನಂತರ ಸಮುದ್ರವನ್ನು ಮಥಿಸಿ ಅಮೃತವನ್ನು ಸಂಪಾದಿಸಬೇಕೆಂಬ ಆಲೋಚನೆಯಲ್ಲಿ ಇದ್ದೇನೆ ಗೊತ್ತಾ ?" ಎಂದನು ರಾವಣ.

"ಇಲ್ಲಿ ಸಮೀಪದಲ್ಲಿರುವ ಯಮಲೋಕವನ್ನು ಬಿಟ್ಟು ಇನ್ನೆಲ್ಲಿಗೋ ಹೋಗುವೆನೆನ್ನುವಿಯೇನಿದು ? ನೀನು ಈಗ ಹೋಗುವ ದಾರಿಯೇ ಯಮ ಲೋಕದ ದಾರಿ. ಆ ಕೆಲಸ ಮುಗಿಸಿಬಿಟ್ಟು, ಉಳಿದ ಕೆಲಸ ನೋಡಬಹುದಷ್ಟೆ ?" ಎಂದನು ನಾರದ.

ರಾವಣನು ಕಾಲಮೇಘವು ಮಿಂಚಿದಂತೆ ನಗಾಡಿ, "ಬಹಳ ಚೆನ್ನಾಗಿ ಹೇಳಿದೆಯೋ ನಾರದಾ. ಒಳ್ಳೆಯ ಸಂತೋಷಪ್ರದವಾದ ಮಾತು. ನಾನು ಈಗಲೇ ಯಮಲೋಕಕ್ಕೆ ಹೋಗುತ್ತೇನೆ. ದಿಕ್ಪಾಲಕರು ನಾಲ್ವರನ್ನೂ ಜಯಿಸುವೆನೆಂದು ಈ ಮೊದಲೇ ಪ್ರತಿಜ್ಞೆ ಮಾಡಿದ್ದೇನೆ. ಈಗ ಹೋಗಿ ಎಲ್ಲಾ ಪ್ರಾಣ ಗಳಿಗೂ ಮರಣಭಯವನ್ನುಂಟುಮಾಡುವ ಆ ಯಮನ ಪ್ರಾಣ ತೆಗೆಯುತ್ತೇನೆ" ಎಂದು ನಾರದನಿಗೆ ನಮಸ್ಕಾರ ಮಾಡಿ ಅಪ್ಪಣೆ ಪಡೆದುಕೊಂಡು ತನ್ನ ಮಂತ್ರಿಗಳೊಂದಿಗೆ ದಕ್ಷಿಣ ದಿಕ್ಕಿಗೆ ಹೊರಟನು.

ಎಲ್ಲಾ ಪ್ರಾಣಿಗಳನ್ನೂ ಕೊಲ್ಲುವ ಯಮನಿಗೆ ಹೇಗೆ ಸಾವು ಬರುತ್ತದೋ ಎಂದು ನಾರದನಿಗೆ ಅರ್ಥವಾಗಲಿಲ್ಲ.

ಆ ಯಮನನ್ನು ರಾವಣನು ಜಯಿಸುವ ಬಗೆ ಯನ್ನು ಕಣ್ಣಾರೆ ನೋಡಬೇಕೆಂದುಕೊಂಡು ಕುತೂಹಲಭರಿತನಾದ ನಾರದನು ಕೂಡಾ ಯಮ ಪಟ್ಟಣಕ್ಕೇ ಹೊರಟನು.





# ಉತ್ತರ ರಾಮಾಯಣ

ನಾರದನ ಮಾತು ಕೇಳಿ ಯಮನನ್ನು ಜಯಿಸಲು ಹೊರಟ ರಾವಣನು ಯಮಲೋಕವನ್ನು ತಲಪಿ, ಅಲ್ಲಿ ಅಸಹ್ಯವಾದ ನರಕದಲ್ಲಿ ನರಳಿಕೊಂಡು ಯಾತನೆ ಪಡುವವರನ್ನೂ, ಮತ್ತೊಂದು ಭಾಗದಲ್ಲಿ ಸ್ವರ್ಗ ಸುಖಗಳನ್ನು ಅನುಭವಿಸಿಕೊಂಡಿರುವ ಪುಣ್ಯವಂತರನ್ನೂ ನೋಡಿದನು.

ಘೋರಾಕಾರಗಳಿಂದ ಕ್ರೂರರಾಗಿ ಕರುಣೆಯ ಪಸೆಯೇ ಇಲ್ಲದಂತಹ ಯಮಕಿಂಕರರು ಪಾಪಿಗಳಿಂದ ಹುಳಗಳನ್ನು ತಿನ್ನಿಸುತ್ತಿದ್ದರು. ಅಸಹ್ಯವಾದ ವೈತರಣೀ ನದಿಯಲ್ಲಿ ಈಜಾಡಿಸುತ್ತಿದ್ದರು. ಸುಟ್ಟ ಮರಳು ರಾಶಿಯ ಮೇಲೆ ಒತ್ತೊತ್ತಿ ಕೂಡಿಸಿ ಹಿಂಸೆಪಡಿಸುತ್ತಿದ್ದರು. ನರಕಯಾತನೆಯನ್ನು ಅನುಭವಿಸುವವರು ಶವಗಳ ಹಾಗೆ ಬಿದ್ದಿದ್ದು, ಬಾಯಾರಿಕೆಯಿಂದಲೂ, ಸಂಕಟದಿಂದಲೂ ಏನೂ ಮಾಡಲಾಗದೆ ಬಿದ್ದಿರುವಲ್ಲಲ್ಲೇ ನಡುಗಿಕೊಂಡಿದ್ದರು.

ಮತ್ತೊಂದು ಭಾಗವಾದ ಸ್ವರ್ಗದಲ್ಲಿ ಪುಣ್ಯ ಮಾಡಿದವರು ಎಲ್ಲಾ ಬಗೆಯ ಭೋಗಗಳನ್ನೂ ಅನುಭವಿಸುತ್ತ ಸುಖಶಾಂತಿ ಸಂತೋಷಗಳಲ್ಲಿರುವುದು ಕಾಣುತ್ತಿತ್ತು.

ಲಕ್ಷಗಣನೆಯ ಪಾಪಿಗಳು ಅನುಭವಿಸುವ ನರಕ ಯಾತನೆ ನೋಡಿ ರಾವಣನು ಕರಗಿಹೋದನು. ಆದರಿಂದ ಆ ಪಾಪಿಗಳನ್ನೆಲ್ಲಾ ನರಕಯಾತನೆಯಿಂದ ಬಿಡುಗಡೆ ಮಾಡಲಿಕ್ಕೂ ತೊಡಗಿದನು.

ರಾವಣನ ಅತಿರೇಕತೆಯನ್ನು ನೋಡಿ ಯಮ ಕಿಂಕರರಿಗೆ ಕೋಪ ಬಂದಿತು. ಅವರು ರಾವಣನ ಮೇಲೆ ಪರಿಘಗಳನ್ನೂ, ಶೂಲಗಳನ್ನೂ, ಮುಸಲಗಳನ್ನೂ, ತೋಮರಗಳನ್ನೂ ಬೇರೆ ಬೇರೆ ಬಗೆಯ ಶಸ್ತ್ರಾಯುಧಗಳನ್ನೂ ಜೇನುನೊಣಗಳ ಹಿಂಡಿನಂತೆ ಪುಷ್ಪಕದ ಮೇಲೆ ಬೀಸಿದರು. ಪುಷ್ಪಕ ವಿಮಾನದೊಳಗಿನ ಆಸನಗಳೂ, ವೇದಿಕೆಗಳೂ, ಮಂಟಪಗಳೂ ಒಡೆದುಹೋದವು. ಯಮಕಿಂಕರರು ಪುಷ್ಪಕದೊಳಗೆ ನುಗ್ಗಿ ಕೈಗೆ ಸಿಕ್ಕಿದುದನ್ನು ಹೊರಗೆ ಬಿಸುಟರು. ಆದರೆ ಅದು ಅಕ್ಷಯ ಗುಣದ ವಿಮಾನವಾದುದರಿಂದ ಎಷ್ಟು ನಾಶವಾದರೂ

೫. ಪಾತಾಳ ಬಲಿ ಸಂದರ್ಶನ




ಮೊದಲಿನಂತೆಯೇ ಮತ್ತೆ ಮತ್ತೆ ತುಂಬಿ ಕಾಣು ತ್ತಿದ್ದಿತು. ಅವಕ್ಕೆ ಯಾವ ಹಾನಿಯೂ ಆದಂತೆ ಕಾಣಲೇ ಇಲ್ಲ. ಯಮಕಿಂಕರರ ಕೈಗಳೇ ಸೋತುವು.

ಇಷ್ಟರೊಳಗೆ ನಾರದನು ನೆಟ್ಟಗೆ ಯಮಧರ್ಮ ರಾಜನ ಬಳಿಗೆ ಹೋಗಿ ನಿಂತನು.

ಯಮನು ಅವನಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು, ಕುಶಲವನ್ನು ವಿಚಾರಿಸಿ ಬಂದ ಕಾರ್ಯವೇನೆಂದು ಕೇಳಿದನು.

"ಯಮಧರ್ಮ, ದಶಗ್ರೀವನೆಂಬ ಅಜೇಯ ನಾದ ರಾಕ್ಷಸನು ನಿನ್ನನ್ನು ಜಯಿಸಿ ಶರಣಾಗಿಸಿ ಕೊಳ್ಳಬೇಕೆಂದು ನಿನ್ನ ಮೇಲೆ ಯುದ್ಧಕ್ಕೆ ಬರುತ್ತಿದ್ದಾನೆ. ಈಗಾಗಲೇ ಬಂದು ತನ್ನ ಕರಾಮತಿ ಪ್ರಾರಂಭಿದ್ದಾನೆ. ನಿನ್ನ ಯಮದಂಡದ ಗತಿ ಏನಾಗುವುದೋ? ಯಾವುದಕ್ಕೂ ನೀನು ಸಿದ್ಧ ನಾಗುವಂತೆ ನಿನ್ನನ್ನು ಎಚ್ಚರಿಸೋಣವೆಂದೇ ಬಂದೆ ನಯ್ಯಾ" ಎಂದನು ನಾರದ.

ಅವನು ಹಾಗೆ ಹೇಳಿ ಮುಗಿಸುವಾಗಲೇ, ದೂರ ದಲ್ಲಿ ಪುಷ್ಪಕ ವಿಮಾನವು ಬರುತ್ತ ಪ್ರಕಾಶಮಾನ ವಾಗಿ ಕಾಣತೊಡಗಿತು.

ರಾವಣನು ಯಮಕಿಂಕರರೊಂದಿಗೆ ಸ್ವಲ್ಪಹೊತ್ತು ಯುದ್ಧಮಾಡಿ, ಕಡೆಗೆ ಅವರ ಮೇಲೆ ಪಾಶುಪತಾಸ್ತ್ರ ವನ್ನು ಪ್ರಯೋಗಿಸಿದನು. ಅದು ಕಾಡುಗಿಚ್ಚಿನಂತೆ ಆ ಪ್ರಾಂತದಲ್ಲಿರುವ ಮರಗಿಡಪೊದರುಗಳನ್ನು ಭಸ್ಮ ಮಾಡುತ್ತ ಜ್ವಾಲೆಗಳನ್ನು ಎಲ್ಲಾ ದಿಕ್ಕುಗಳಿಗೂ ವ್ಯಾಪಿಸುವಂತೆ ಉರಿಯಿತು. ಯಮದೂತರು ಆ ಜ್ವಾಲೆಗೆ ಸಿಕ್ಕಿ ಪಾಂತೆಗಳಂತೆ ಸುಟ್ಟುಹೋದರು. ರಾವಣನೂ ಅವನ ಮಂತ್ರಿಗಳೂ ದಿಕ್ಕುಗಳು ಗಡಚಿಕ್ಕುವಂತೆ ಭಯಂಕರವಾಗಿ ಆರ್ಭಟಿಸಿದರು.

ಆ ಶಬ್ದವನ್ನು ಕೇಳಿ ಯಮನು ಯುದ್ಧದಲ್ಲಿ ರಾವಣನು ಜಯಿಸಿದನೆಂದು ತಿಳಿದು, ಸಾರಥಿಯನ್ನು ಕರೆದು ತನ್ನ ರಥವನ್ನು ಯುದ್ಧಕ್ಕೆ ಸಿದ್ಧಮಾಡಿ ತರುವಂತೆ ಅಪ್ಪಣೆ ಕೊಟ್ಟನು. ಕ್ಷಣಮಾತ್ರದಲ್ಲಿ ಕೆಂಪಗಿನ ಕುದುರೆಗಳನ್ನು ಹೂಡಿದ ರಥವು ಸಿದ್ಧ ವಾಗಿ ಬಂದಿತು. ಮೃತ್ಯುದೇವತೆ ಪಾಶವನ್ನೂ, ಮುದ್ಗರಾಯುಧವನ್ನೂ ಧರಿಸಿ ರಥದಲ್ಲಿ ಯಮನ ಮುಂದೆ ನಿಂತಳು. ಯಮನು ರಥದ ಮೇಲೇರಿ ಕುಳಿತುಕೊಳ್ಳುತ್ತಲೇ, ಅವನ ಒಂದು ಬದಿಯಲ್ಲಿ ಕಾಲದಂಡವೂ, ಇನ್ನೊಂದು ಬದಿಯಲ್ಲಿ ಕಾಲಪಾಶವೂ ಸೇರಿಕೊಂಡುವು.

ಹೀಗೆ ಯಮನು ರಾವಣನೊಂದಿಗೆ ಯುದ್ಧಕ್ಕೆ ಹೊರಟುದನ್ನು ನೋಡಿ ಮೂರು ಲೋಕಗಳೂ ಸಂಕ್ಷೋಭಿಸಿದುವು. ಏನಾಗುವುದೋ ಎಂದು ದೇವತೆ ಗಳೂ ಕಂಪಿಸತೊಡಗಿದರು.

ಮನೋವೇಗದ ರಥಾಶ್ವಗಳು ಯಮನನ್ನು ಕ್ಷಣಾರ್ಧದಲ್ಲಿ ರಾವಣನ ಮುಂದೆ ತಂದು ನಿಲ್ಲಿಸಿ ದುವು. ಮೃತ್ಯುದೇವತೆಯೊಡಗೂಡಿ ಅತಿ ಭಯಾನಕ ವಾಗಿರುವ ಯಮರಥವನ್ನು ನೋಡಿದ ಕೂಡಲೇ



ರಾವಣನ ಮಂತ್ರಿಗಳು ಭಯಭ್ರಾಂತರಾಗಿ ಪುಷ್ಪಕದಿಂದ ಜಿಗಿದು ನಾಲ್ಕು ದಿಕ್ಕುಗಳಿಗೂ ಓಡಿಹೋದರು. ರಾವಣನು ಮಾತ್ರ ಲವಲೇಶವೂ ಹೆದರದೆ ಕಣ್ಣು ತಿರುಗಿಸುತ್ತ ಸ್ಥಿರವಾಗಿ ರಣೋತ್ಸುಕತೆಯಲ್ಲಿ ನಿಂತನು.

ಯಮ-ರಾವಣರೊಳಗೆ ಏಳು ಹಗಲು ಏಳು ರಾತ್ರಿಗಳವರೆಗೆ ದೊಡ್ಡ ಯುದ್ಧವು ನಡೆಯಿತು. ಯಮನು ಪ್ರಯೋಗಿಸಿದ ಅಸ್ತ್ರಗಳಿಂದ ರಾವಣನ ಶರೀರದಲ್ಲಿ ಅನೇಕ ಗಾಯಗಳಾದುವು. ರಾವಣನು ಅವುಗಳನ್ನೆಲ್ಲ ತೃಣವಾಗಿ ನೋಡಿದನು. ಸೋಲಿನ ಛಾಯೆಗೆ ವಾಲದೆ, ಓಡಿಹೋಗುವ ವಿಚಾರಕ್ಕೂ ಹೋಗದೆ. ಮೇಲಿಂದ ಮೇಲೆ ತನ್ನ ಬಾಣಗಳಿಂದ, ಯಮನನ್ನೂ, ಮೃತ್ಯು ದೇವತೆಯನ್ನೂ, ಸಾರಥಿಯನ್ನು ಕೂಡಾ ಅತ್ಯಂತವಾಗಿ ನೋಯಿಸಿದನು.

ಅದನ್ನು ನೋಡಿ ಮೃತ್ಯು ದೇವತೆ ಯಮನೊಂದಿಗೆ "ಈ ರಾಕ್ಷಸನೊಂದಿಗೆ ನಾನೊಬ್ಬಳೇ ಯುದ್ಧ ಮಾಡುತ್ತೇನೆ. ಇವನನ್ನು ಕ್ಷಣಮಾತ್ರದಲ್ಲಿ ಕೊಲ್ಲಿಸುತ್ತೇನೆ. ಕೊಲ್ಲುವುದೇ ನನ್ನ ಹಕ್ಕು, ನಾನು ಎಷ್ಟೋ ಮಹಾ ರಾಕ್ಷಸರ ಸಾವನ್ನು ನೋಡಿದ್ದೇನೆ. ಇವನು ಎಂಥವನೇ ಆದರೂ ನನಗೊಂದು ಲೆಕ್ಕವೆ ?" ಎಂದಳು.

"ನೀನು ಸುಮ್ಮನೇ ನೋಡುತ್ತಾ ಇರು. ಇವನನ್ನು ನಾನೇ ಕೊಲ್ಲುತ್ತೇನೆ" ಎಂದು ಯಮನು ಕಾಲದಂಡವನ್ನು ಹಿಡಿದು ಮೇಲೆತ್ತಿದನು. ಅದರ ತೀಕ್ಷ್ಣ ಪ್ರಕಾಶದಿಂದ ನಾಲ್ಕು ಸುತ್ತಲೂ ತಾಳಲಾಗದಷ್ಟು ಬಿಸಿಯಾಗತೊಡಗಿತು.

ಅದು ಒಂದೇ ಸಮನೆ ಕಿಡಿಗಳನ್ನುಗುಳುತ್ತ ಮಹಾ ಭಯಂಕರವಾಗಿ ಉಜ್ವಲಿಸಿ ಕಾಣತೊಡಗಿತು. ಅದನ್ನು ರಾವಣನ ಮೇಲೆ ಪ್ರಯೋಗಿಸಲು ನೋಡುವಾಗ ಇದ್ದಕ್ಕಿದ್ದ ಹಾಗೆ ಅವನ ಮುಂದೆ ಬ್ರಹ್ಮನು ಪ್ರತ್ಯಕ್ಷನಾದನು.

"ಯಮಧರ್ಮಾ, ಅದನ್ನು ಕೆಳಗಿಳಿಸು. ಪ್ರಯೋಗಿಸಬೇಡ. ಇದರಿಂದ ರಾವಣನು ಸತ್ತು ಹೋಗಿಬಿಟ್ಟರೆ, ನಾನು ಅವನಿಗೆ ಕೊಟ್ಟ ವರಗಳೆಲ್ಲವೂ ಸುಳ್ಳಾಗುತ್ತವೆ. ನಿನ್ನ ಕಾಲದಂಡದಿಂದ ಅವನು ಸಾಯದಿದ್ದರೆ, ನಾನು ಯಾವ ಉದ್ದೇಶದಿಂದ ಕಾಲದಂಡವನ್ನು ಸೃಷ್ಟಿಸಿದೆನೋ ಅದೂ ಸುಳ್ಳಾಗುತ್ತದೆ. ಮೃತ್ಯುವಿನೊಂದಿಗೆ ಅಮೋಘವಾದ ಈ ಕಾಲದಂಡವನ್ನೂ ನಾನು ಸೃಷ್ಟಿಸಿದ ಉದ್ದೇಶವೇ ಸುಳ್ಳಾಗುವುದೆಂದರೆ ನಾನೇ ವ್ಯರ್ಥನಾಗುತ್ತೇನೆ. ಆದುದರಿಂದ ಕಾಲದಂಡವನ್ನು ರಾವಣನ ಮೇಲೆ ಪ್ರಯೋಗಿಸಿದರೆ ನಾನೇ ಇಲ್ಲದಂತಾಗಿ ಲೋಕಗಳು ನಿರಾಧಾರವಾಗುತ್ತವೆ. ಪ್ರಸ್ತುತದಲ್ಲಿ ರಾವಣನನ್ನು ಅವನ ಪಾಡಿಗೆ ಬಿಟ್ಟುಬಿಡುವುದೇ ಒಳ್ಳೆಯದು" ಎಂದು ಎಚ್ಚರಿಸಿದನು.

ಬ್ರಹ್ಮದೇವನ ಮಾತನ್ನು ಮನ್ನಿಸಿ ಯಮನು ಕಾಲದಂಡವನ್ನು ಬದಿಯಲ್ಲಿಟ್ಟನು. ರಾವಣನನ್ನು



ಕೊಲ್ಲಲು ತನಗೆ ಅವಕಾಶವಿಲ್ಲದ ಪಕ್ಷಕ್ಕೆ, ತಾನು ಯುದ್ಧರಂಗದಲ್ಲಿ ಏನು ಮಾಡಬೇಕೆಂದು ತಿಳಿಯದೆ, ಯಮನು ತನ್ನ ರಥದೊಂದಿಗೇ ಅಂತರ್ಧಾನನಾಗಿ ಬ್ರಹ್ಮನೊಂದಿಗೆ ಸ್ವರ್ಗಕ್ಕೆ ಹೋಗಿಬಿಟ್ಟನು. ಇದನ್ನೆಲ್ಲಾ ಕಣ್ಣಾರೆ ನೋಡಿದ ರಾವಣನು ಪರಮಾನಂದದಿಂದ ತಲೆಗಳನ್ನು ಕುಣಿಸಿದನು. ತಾನು ಯಮನನ್ನು ಜಯಿಸಿದೆನೆಂಬ ಉಬ್ಬಿನಲ್ಲಿ ಪುಷ್ಪಕ ವಿಮಾನವನ್ನೇರಿ ಯಮಪುರಿಯೊಳಗೆ ಪ್ರವೇಶ ಮಾಡಿದನು. ಈಗ ಅವನನ್ನು ತಡೆಯಲಿಕ್ಕೂ, ಶರಣೆನ್ನಲಿಕ್ಕೂ ಯಾರೂ ಕಾಣಲಿಲ್ಲ.

ಇದನ್ನೆಲ್ಲಾ ನೋಡುತ್ತಿದ್ದ ನಾರದನಿಗೆ ಎಷ್ಟು ಆನಂದವಾಯಿತೆಂದು ಹೇಳಲು ಸಾಧ್ಯವಿಲ್ಲ.

ಓಡಿದ ಮಂತ್ರಿಗಳೆಲ್ಲಾ ತಿರುಗಿ ಬಂದು ರಾವಣನನ್ನು ಪ್ರಶಂಸಿಸತೊಡಗಿದರು. ಹೀಗೆ ತನ್ನವರ ಪ್ರಶಂಸೆಗಳನ್ನು ಸ್ವೀಕರಿಸಿಕೊಳ್ಳುತ್ತ ರಾವಣನು ಪುಷ್ಪಕವಿಮಾನವನ್ನೇರಿ, ಪಾತಾಳ ಲೋಕದ ಕಡೆಗೆ ಹೊರಟನು.

ರಾವಣನು ಪುಷ್ಪಕದಲ್ಲಿ ವರುಣನ ಪರಿಪಾಲನೆಯಲ್ಲಿರುವ ಸಮುದ್ರದೊಳಗೆ ಪ್ರವೇಶಿಸಿ ವಾಸುಕಿ ಮೊದಲಾದ ನಾಗರಿರುವ ಭೋಗವತಿ ನಗರವನ್ನು ಹೊಕ್ಕು ಇದಿರಿಸುವವರು ಯಾರೂ ಇಲ್ಲದೆ ಅದನ್ನು ಸ್ವಾಧೀನಪಡಿಸಿಕೊಂಡನು.

ಅಲ್ಲಿಂದ ನಿವಾತಕವಚರಿರುವ ಮಣಿಮತಿ ನಗರದೊಳಗೆ ಹೋದನು. ಬಗೆಬಗೆಯ ಆಯುಧಗಳನ್ನು ಧರಿಸಿದ ಅಜೇಯರೆನಿಸುವ ನಿವಾತಕವಚರು ರಾವಣನನ್ನು ತಡೆಗಟ್ಟಿ ನಿಂತು ಯುದ್ಧ ಮಾಡಲು ತೊಡಗಿದರು.

ಅವರೊಳಗಿನ ಯುದ್ಧವು ಒಂದು ಸಂವತ್ಸರದವರೆಗೆ ಸಾಗಿದರೂ ಜಯಾಪಜಯಗಳು ಗೊತ್ತಾಗಲಿಲ್ಲ. ಆಗ ಬ್ರಹ್ಮನು ವಿಮಾನದ ಮೇಲೆ ಅಲ್ಲಿಗೆ ಬಂದು ಉಭಯ ಪಕ್ಷದವರಿಗೂ ಸಮಾಧಾನ ಹೇಳಿ ಅವರಿಬ್ಬರೊಳಗೆ ಸಂಧಿ ಮಾಡಿಸಿ ಸ್ನೇಹ ಹೊಂದಿಸಿ ಹೊರಟು ಹೋದನು. ಅದರಿಂದ ನಿವಾತಕವಚರು ಮನಃಪೂರ್ವಕ ರಾವಣನ ಸ್ನೇಹಿತರಾದರು. ಹಾಗಾಗಿ ರಾವಣನು ನಿವಾತಕವಚರ ಅತಿಥಿಯಾಗಿ ಮತ್ತೊಂದು ವರ್ಷವನ್ನು ಅಲ್ಲಿ ಕಳೆಯುತ್ತ ತನ್ನ ಸ್ವಂತ ನಗರದಲ್ಲಿರುವಂತೆಯೇ ಅಲ್ಲಿದ್ದನು. ಆ ಸಮಯದಲ್ಲಿ ರಾವಣನು ನಿವಾತಕವಚರಿಂದ ತನಗೆ ತಿಳಿಯದ ತೊಂಬತ್ತೊಂಬತ್ತು ಬಗೆಯ ಮಾಯೆಗಳನ್ನು ಕಲಿತನು.

ಅನಂತರ ಅಲ್ಲಿಂದ ಹೊರಟ ರಾವಣನು ವರುಣನ ನಗರವನ್ನು ಹುಡುಕಿಕೊಂಡು ಹೋದನು.

ದಾರಿಯಲ್ಲಿ ಅವನಿಗೆ ಕಾಲಕೇಯರಿರುವ ಅಶ್ಮ ನಗರವು ತಗಲಿತು. ಅಲ್ಲಿ ರಾವಣನಿಗೆ ಕಾಲಕೇಯರೊಂದಿಗೆ ಯುದ್ಧವು ತಟಸ್ಥವಾಯಿತು. ಕಾಲಕೇಯ ವೀರರನೇಕರು ರಾವಣನ ಕೈಯಲ್ಲಿ ಹತರಾದರು. ಹಾಗೆ ಸತ್ತವರಲ್ಲಿ ಶೂರ್ಪನಖೆಯ



ಗಂಡನಾದ ವಿದ್ಯುಜ್ಜಿಹ್ವನೂ ಒಬ್ಬನು. ಅತ್ಯಂತ ಬಲಗರ್ವಿತನಾದ ವಿದ್ಯುಜ್ಜಿಹ್ವನು ಮಿಂಚಿನ ಹಾಗೆ ತನ್ನ ನಾಲಗೆ ಚಾಚಿ ರಾಕ್ಷಸರನ್ನು ನೆಕ್ಕಿ ಸಾಯಿಸಿ ಬಿಡುವಂತಹವನು. ರಾವಣನು ಅವನನ್ನು ಕತ್ತಿಯಿಂದ ಕಡಿದು ಕೊಂದುಬಿಟ್ಟನು. ಒಟ್ಟಿನ ಮೇಲೆ ನಾನ್ನೂರು ಮಂದಿ ಕಾಲಕೇಯ ವೀರರು ರಾವಣನ ಕೈಯಲ್ಲಿ ಸತ್ತರು.

ಅಲ್ಲಿಂದ ಹೊರಟ ರಾವಣನು ವರುಣನ ಮಂದಿರವನ್ನು ತಲಪಿದನು. ಆ ಭವನವು ಬಿಳೀ ಮೋಡದ ಹಾಗೆಯೂ, ಕೈಲಾಸದ ಹಾಗೆಯೂ ಕಾಣುತ್ತಿದ್ದಿತು. ಅಲ್ಲಿ ಅನುಕ್ಷಣವೂ ಹಾಲಿನ ಧಾರೆಗಳನ್ನು ಸ್ರವಿಸುವ ಸುರಭಿ ಎಂಬ ಕಾಮಧೇನು ರಾವಣನ ಕಣ್ಣಿಗೆ ಬಿತ್ತು. ಅದರ ಹಾಲಿನಿಂದಲೇ ಹಾಲಿನ ಸಮುದ್ರವು ಏರ್ಪಟ್ಟು ಪ್ರಸಿದ್ಧವಾಗಿತ್ತು. ಆ ಹಾಲಿನ ಸಮುದ್ರದಲ್ಲಿಯೇ ಚಂದ್ರನ ಜನನವಾಗಿತ್ತು. ಅಮೃತವೂ ಹುಟ್ಟಿತ್ತು. ಹಾಲಿನ ಸಮುದ್ರದ ನೊರೆಗಳನ್ನು ತಿಂದೇ ಕೆಲವು ಮಹರ್ಷಿಗಳು ಜೀವಿಸುತ್ತಿದ್ದರು. ಕಾಮಧೇನುವಿನ ಪುತ್ರನೇ ಶಿವನಿಗೆ ವಾಹನವಾದ ನಂದೀಶ್ವರ. ಈ ಬಗೆಯ ಕಾಮಧೇನುವಿನ ಮಹತ್ತ್ವವು ರಾವಣನಿಗೆ ಗೊತ್ತಿದ್ದಿತು.

ಅಷ್ಟೊಂದು ಮಹಿಮೆಯುಳ್ಳ ಕಾಮಧೇನುವನ್ನು ನೋಡಿ ರಾವಣನು ಭಕ್ತಿಯಿಂದ ಅದಕ್ಕೆ ಪ್ರದಕ್ಷಿಣೆ ಮಾಡಿ, ವರುಣ ಮಂದಿರವನ್ನು ಸಮೀಪಿಸಿದನು. ಆಗ ವರುಣನ ಯೋಧರು ರಾವಣನ ಉದ್ದೇಶ ತಿಳಿದು ಅವನನ್ನು ಮುಂದೆ ಬರಲು ಬಿಡದೆ ಯುದ್ಧಕ್ಕೆ ತೊಡಗಿದರು. ರಾವಣನು ಅವರ ನಾಯಕನನ್ನು ಕೊಂದು ಉಳಿದ ಯೋಧರ ತಂಟೆಗೆ ಹೋಗದೆ, "ರಾವಣನು ಯುದ್ಧಕ್ಕೆ ಬಂದಿರುವನೆಂದು ವರುಣನೊಂದಿಗೆ ಹೇಳಿರಿ. ನಿಮ್ಮಂಥ ಅಲ್ಪರೊಂದಿಗೆ ಯುದ್ಧ ಮಾಡುವವನಲ್ಲ ನಾನು" ಎಂದು ಅವರನ್ನು ಓಡಿಸಿದನು.

ಅದನ್ನು ಕೇಳಿ ವರುಣನ ಮಗಂದಿರೂ, ಮೊಮ್ಮಕ್ಕಳೂ ತಮ್ಮ ತಮ್ಮ ಪರಿವಾರದೊಂದಿಗೆ ರಥಗಳ ಮೇಲೇರಿ ರಾವಣನ ಮೇಲೆ ಯುದ್ಧಕ್ಕೆ ಬಂದರು. ಅವರೆಲ್ಲರೂ ಕ್ಷಣ ಮಾತ್ರದಲ್ಲಿ ರಾವಣನ ಕೈಯಲ್ಲಿ ಸೋತುಹೋದರು. ರಾವಣನ ಮಂತ್ರಿಗಳು ಅವರ ಪರಿವಾರವನ್ನೆಲ್ಲಾ ಓಡಿಸಿಬಿಟ್ಟರು. ವರುಣ ಪುತ್ರರು ವೀರೋಚಿತವಾಗಿ ಹೋರಾಡಿ ಪರಾಜಿತರಾದರು. ಆಮೇಲೆ ರಾವಣನು ವರುಣನನ್ನು ಯುದ್ಧಕ್ಕೆ ಕರೆಯಲು, ವರುಣನು ಮನೆಯಲ್ಲಿಲ್ಲವೆಂದೂ, ಸಂಗೀತ ಕೇಳಲು ಬ್ರಹ್ಮಲೋಕಕ್ಕೆ ಹೋಗಿದ್ದಾನೆಂದೂ ಗೊತ್ತಾಯಿತು.

ರಾವಣನು ತಾನು ವರುಣನನ್ನು ಗೆದ್ದೆನೆಂದು ಘಂಟಾಘೋಷವಾಗಿ ಪ್ರಕಟಿಸಿ, ಪುಷ್ಪಕ ವಿಮಾನವನ್ನೇರಿ ತಿರುಗಿ ಅಶ್ಮ ನಗರಕ್ಕೆ ಬಂದನು. ಅಲ್ಲಿ ಅವನು ಮದಗರ್ವಿತನಾಗಿ ವಿಹರಿಸಿಕೊಂಡಿರುವಾಗ, ಅವನಿಗೆ ಒಂದು ಅದ್ಭುತವಾದ ಭವನವು ಕಣ್ಣಿಗೆ ಬಿತ್ತು.



ಆ ದಿವ್ಯ ಭವನವು ವೈಡೂರ್ಯ ತೋರಣಗಳಿಂದ ರಾರಾಜಿಸುತಿತ್ತು. ಮುತ್ತಿನ ಜಾಲರಿಗಳಿಂದ, ಬಂಗಾರದ ಕಂಬಗಳಿಂದ ಸ್ಫಟಿಕ ಸೋಪಾನಗಳಿಂದ ಅಪೂರ್ವ ಶೋಭಾಯಮಾನವಾಗಿತ್ತು.

ರಾವಣನು ಪ್ರಹಸ್ತನೊಂದಿಗೆ "ಇಷ್ಟು ಸುಂದರವಾದ ಭವನವು ಯಾರದೆಂದು ನೋಡಿ ಬಾ" ಎಂದು ಹೇಳಿ ಕಳುಹಿಸಿದನು.

ಪ್ರಹಸ್ತನು ಅಲ್ಲಿಗೆ ಹೋಗಿ ಮೊದಲನೇ ಪ್ರಾಕಾರವನ್ನು ದಾಟಿದಾಗ ಯಾರೂ ಕಾಣಿಸಲಿಲ್ಲ. ಹಾಗೆಯೇ ಅವನು ಏಳು ಪ್ರಾಕಾರಗಳನ್ನು ದಾಟಿ ಹೋಗಲು ಒಳಗೆ ಒಂದು ಜ್ವಾಲೆ ಕಾಣಿಸಿತು. ಅದರ ಮಧ್ಯದಲ್ಲಿ ದಿವ್ಯ ಪುರುಷನೊಬ್ಬನು ಕಂಡು ಬಂದನು. ಅವನು ಸೂರ್ಯನ ಹಾಗೆ ಬೆಳಗುತ್ತ ಕಣ್ಣು ಬಿಡಿಸಿ ನೋಡಲಾಗದಷ್ಟು ತೇಜಸ್ಸಿನಿಂದಿದ್ದನು.

ಆ ಮಹಾಪುರುಷನು ಪ್ರಹಸ್ತನನ್ನು ನೋಡಿದ ಕೂಡಲೇ ಸಂತೋಷದಿಂದ ನಗುವನ್ನು ಬಿಂಬಿಸಿದನು. ಆ ನಗುವನ್ನು ಕಂಡು ಪ್ರಹಸ್ತನ ಶರೀರವು ಪುಲಕಿತವಾಯಿತು. ಅವನು ಕೂಡಲೇ ರಾವಣನ ಬಳಿಗೆ ಹಿಂದಿರುಗಿ, ತಾನು ನೋಡಿದುದನ್ನು ರಾವಣನೊಂದಿಗೆ ಹೇಳಿದನು.

ಆ ಸಂಗತಿಯನ್ನು ಕೇಳಿ ರಾವಣನು ಪುಷ್ಪಕದಿಂದ ಇಳಿದು, ಆ ಭವನದೊಳಗೆ ಹೋಗಲಿರುವಾಗ, ದ್ವಾರವನ್ನು ಪೂರ್ತಿಯಾಗಿ ಆಕ್ರಮಿಸಿಕೊಂಡು ಭಯಂಕರಾಕಾರದವನೊಬ್ಬನು ನಿಂತಿರುವುದನ್ನು ನೋಡಿದನು.

ಆ ಬೃಹದಾಕಾರನ ನೆತ್ತಿಯಲ್ಲಿ ಚಂದ್ರನಿದ್ದನು. ಬಾಯಿಯಿಂದ ಭಯಂಕರವಾದ ಜ್ವಾಲೆ ಹೊರಡುತ್ತಿದ್ದಿತು. ಕಣ್ಣುಗಳೂ ತುಟಿಗಳೂ ಕೆಂಪಗೆ ಕೆಂಡದ ಹಾಗಿದ್ದುವು. ಮುಖವು ಬೆಳ್ಳಗಿದ್ದಿತು. ತಲೆಗೂದಲು ಮೇಲೆದ್ದು ಪೊದರಾಗಿ ನಿಂತಿದ್ದುವು. ದಟ್ಟವಾದ ಮೀಸೆಗಳೂ ಗಡ್ಡವೂ, ದೊಡ್ಡ ದೊಡ್ಡ ಕೋರೆ ಹಲ್ಲುಗಳೂ ಇದ್ದು, ಕೈಯಲ್ಲಿ ಮುದ್ಗರಾಯುಧವನ್ನು ಹಿಡಿದಿದ್ದನು. ಅವನು ದೇವನೋ ರಾಕ್ಷಸನೋ ತಿಳಿಯಲಿಲ್ಲ.

ಆ ಭಯಂಕರಾಕಾರವನ್ನು ನೋಡಿದ ಕೂಡಲೇ ಅವನು ಯಾರೆಂದು ತಿಳಿಯದೆ ರಾವಣನ ಶರೀರವೆಲ್ಲಾ ರೋಮಾಂಚನವಾಯಿತು.

ಆ ಬೃಹದಾಕಾರದವನು ರಾವಣನನ್ನು ನೋಡಿ, "ಎಲೋ ರಾಕ್ಷಸಾ! ಹೆದರಬೇಡ. ನಿನ್ನ ಅಪೇಕ್ಷೆ ಏನೆಂಬುದನ್ನು ಹೇಳು" ಎಂದನು ಒಳ ಕಂಠದಿಂದ.

"ನನಗೆ ಯುದ್ಧವು ಬೇಕು" ಎಂದನು ರಾವಣ.

"ಯಾರೊಡನೆ ಯುದ್ಧ ಮಾಡುವಿ? ನನ್ನೊಡನೆ ಮಾಡುವಿಯಾ, ಬಲಿಯೊಡನೆ ಮಾಡುವಿಯಾ?" ಎಂದು ಆ ಕರಾಳ ಮೂರ್ತಿ ಕೇಳಿದನು.

"ಈ ಮನೆ ಯಾರದೋ ಅವರೊಂದಿಗೇ ಯುದ್ಧ ಮಾಡುತ್ತೇನೆ" ಎಂದನು ರಾವಣ.

"ಹಾಗೆಯೇ ಮಾಡು. ಬಲಿ ಒಳಗೆ ಇದ್ದಾನೆ. ಬೇಕಾದರೆ ಯಾವ ಆತಂಕವೂ ಇಲ್ಲದೆ ಆತನೊಂದಿಗೆ

ಯುದ್ಧ ಮಾಡು. ನಿನಗೆ ಸಾಕೆನಿಸುವಷ್ಟರವರೆಗೂ ಯುದ್ಧ ಮಾಡು" ಎಂದನು ಕರಾಳಾಕಾರದವನು.

ರಾವಣನು ಒಳಗೆ ಹೋಗಿ ಸೂರ್ಯನ ಹಾಗೆ ಬೆಳಗಿಕೊಂಡಿರುವ ಬಲಿಯನ್ನು ನೋಡಿದನು. ಬಲಿ ಸಮೀಪ ಬಂದ ರಾವಣನನ್ನು, ಮಗುವನ್ನು ಎತ್ತಿ ದಂತೆ ಹಗುರಾಗಿ ಹಿಡಿದೆತ್ತಿ ತನ್ನ ತೊಡೆಯ ಮೇಲೆ ಕೂಡಿಸಿಕೊಂಡು, "ಏನು ಕೆಲಸದ ಮೇಲೆ ಬಂದೆ ಯೆಂಬುದನ್ನು ಹೇಳಪ್ಪಾ? ನಿನ್ನ ಎಂತಹ ಆಸೆ ಯನ್ನಾದರೂ ನಾನು ತೀರಿಸುತ್ತೇನೆ. ನಿಃಶಂಕೆ ಯಿಂದ ಕೇಳು" ಎಂದನು.

"ಮತ್ತೇನಿಲ್ಲ ಮಹಾನುಭಾವರೇ! ಪೂರ್ವದಲ್ಲಿ ವಿಷ್ಣು ನಿಮ್ಮನ್ನು ಮೋಸಗೊಳಿಸಿ ಬಂಧಿಸಿದ್ದಾನೆಂದು ಎಲ್ಲರೂ ಹೇಳುತ್ತಾರೆ. ನಿಮ್ಮನ್ನು ಬಿಡಿಸುವ ಶಕ್ತಿ ನನಗಿದೆ, ಆದುದರಿಂದ ಆ ಕೆಲಸವನ್ನು ಮಾಡಿ ಹೋಗೋಣವೆಂದು ಬಂದಿದ್ದೇನೆ" ಎಂದು ರಾವಣನು ಸಮಯಕ್ಕೆ ತಕ್ಕ ರೀತಿಯಲ್ಲಿ ಹೇಳಿದನು.

"ಹಾಗೇನು ಸಮಾಚಾರ? ಹಾಗಾದರೆ ನಿನಗೆ ಒಂದು ಸಣ್ಣ ಸಂಗತಿ ಹೇಳಬೇಕಾಗಿದೆ. ಅಕೋ, ಅಲ್ಲಿ ಬಿದ್ದಿರುವ ಆ ಕುಂಡಲವನ್ನು ಎತ್ತಿಕೊಂಡು ಬಾ" ಎಂದನು ಬಲಿ.

ರಾವಣನು ಅವನು ತೋರಿಸಿದಲ್ಲಿ ಹೋಗಿ ನೋಡಿದಾಗ ಆ ಕುಂಡಲವು ದೊಡ್ಡದೊಂದು ಚಕ್ರದ ಪ್ರಮಾಣದಲ್ಲಿರುವುದು ಕಂಡಿತು. ರಾವಣನು ಅದನ್ನು ಸುನಾಯಾಸವಾಗಿ ಎತ್ತಿಕೊಳ್ಳಲು ಹೋದನು.

ಆದರೆ ಅದನ್ನು ಅಲುಗಿಸಲಿಕ್ಕೇ ಆಗದೆ ಪರಾಭವಗೊಂಡನು. ಕಡೆಗೆ ಅವನು ತನ್ನ ಎರಡು ಕೈಗಳಿಂದಲೂ ಅದನ್ನು ಎತ್ತಲು ನೋಡಿ ದರೂ ಅದೇನೂ ಕದಲಲಿಲ್ಲ,

ಅದನ್ನು ನೋಡಿ ಬಲಿ ರಾವಣನನ್ನು ಹತ್ತಿರ ಕರೆದು, "ನೀನು ಕದಲಿಸಲಾಗದೆ ಹೋದ ಆ ಕುಂಡಲವು, ನಮ್ಮ ಪೂರ್ವಿಕನಾದ ಹಿರಣ್ಯಕಶಿಪು ವಿನ ಕಿವಿಯ ಕುಂಡಲ. ಅವನು ಯಾರಿಂದಲೂ ಸಾವು ಬಾರದಂತೆ ವರಗಳನ್ನು ಪಡೆದು ಕಡೆಗೆ, ನರಸಿಂಹನ ರೂಪ ತಳೆದ ವಿಷ್ಣುವಿನ ಕೈಯಲ್ಲಿ ಸತ್ತುಹೋದನು. ಆ ವಿಷ್ಣುವನ್ನೇ ನೀನು ದ್ವಾರದ ಹತ್ತಿರ ನೋಡಿದಿ. ಅವನು ಯಾವಾಗಲೂ ಅಲ್ಲಿಯೇ ಕಾವಲು ಕಾಯುತ್ತಾ ಇರುತ್ತಾನೆ. ಅವನ ಇಚ್ಛೆಯಿಲ್ಲದೆ ಯಾರೂ ನನ್ನ ಬಳಿಗೆ ಬಾರರು. ಅವನು ನಿನ್ನನ್ನು ಒಳಗೆ ಬಿಟ್ಟುದರಿಂದಲೇ ನೀನು ನನ್ನ ಬಳಿಗೆ ಬಂದಿರುವಿ" ಎಂದನು.

ಆ ಮಾತುಗಳನ್ನು ಕೇಳಿ ರಾವಣನು ಕ್ರೋಧ ದಿಂದ ದ್ವಾರದ ಬಳಿಗೆ ಹೋದನು. ಆದರೆ ಅಲ್ಲಿ ಅವನಿಗೆ ಯಾರೂ ಕಾಣಿಸಲಿಲ್ಲ.








ರಾವಣನು ವರುಣ ಲೋಕದಿಂದ ಹೊರಟು ತನ್ನ ವಿಮಾನದಲ್ಲಿ ಲಂಕೆಯ ಕಡೆಗೆ ಹಿಂದಿರುಗುತ್ತ ದಾರಿಯಲ್ಲಿ ಕಂಡ ಸುಂದರಿಯರಾದ ಕನ್ಯೆಯರನ್ನು ಸೆರೆ ಹಿಡಿಯುತ್ತ, ಹೀಗೆ ಸಾವಿರಾರು ಕನ್ಯೆಯರನ್ನು ತನ್ನ ಪುಷ್ಪಕದೊಳಗೆ ಸೇರಿಸಿಕೊಂಡನು. ಅವರೆಲ್ಲಾ ಗೋಳಾಡಿಕೊಂಡಿದ್ದರು. ಗೋಳಾಡುತ್ತಾ ಬಗೆಬಗೆಯ ಶಾಪಗಳನ್ನು ಕೂಡಾ ರಾವಣನಿಗೆ ಕೊಟ್ಟರು. ಅವುಗಳನ್ನು ರಾವಣನು ಕೇಳಿಕೊಂಡಿದ್ದರೂ ಸ್ವಲ್ಪವೂ ಲಕ್ಷ್ಯ ಮಾಡಲಿಲ್ಲ.

ರಾವಣನು ಲಂಕೆಗೆ ಬಂದು ತನ್ನ ಮನೆಯನ್ನು ಸೇರಿದ ಕೂಡಲೇ ಅವನ ತಂಗಿ ಶೂರ್ಪನಖಿ ದೊಡ್ಡ ದನಿಯಿಂದ ಅಳುತ್ತಾ, ಅವನ ಇದಿರಿಗೆ ಬಂದು, "ಏನು ಹೇಳಲಿ ಅಣ್ಣಾ ! ನೀನು ಎಲ್ಲಾ ಕಾಲಕೇಯರನ್ನೂ ಕೊಲ್ಲುವಾಗ ನೀನೇ ನನಗಾಗಿ ಕರೆದು ತಂದು ಮದುವೆ ಮಾಡಿಸಿದ ನನ್ನ ಗಂಡನನ್ನು ಕೂಡಾ ಕೊಂದು ನನ್ನನ್ನು ವಿಧವೆಯಾಗಿ ಮಾಡಿದಿಯಲ್ಲಾ ! ನಿನ್ನ ಬಾವಯ್ಯನೆಂಬ ಒಂದು ಸಣ್ಣ ಪರಿಜ್ಞಾನ ಕೂಡಾ ನಿನಗಿಲ್ಲದೆ ಹೋಗಬೇಕೇ ? ಇನ್ನು ಮೇಲೆ ನನ್ನ ಗತಿ ಏನಣ್ಣಾ ?" ಎಂದು ನಿಂದಿಸುತ್ತಾ ಅತ್ತಳು.

"ತಂಗೀ ! ನಡೆದು ಹೋದುದಕ್ಕೆ ಇನ್ನು ಹೀಗೆಲ್ಲಾ ಅತ್ತು ನಿಂದಿಸಿ ಏನು ಪ್ರಯೋಜನ ? ಯುದ್ಧೋನ್ಮಾದದಲ್ಲಿರುವ ಸಮಯದಲ್ಲಿ ಯಾರಿಗಾದರೂ ಇವನು ನಮ್ಮವ ಪರರವನೆಂಬ ಜ್ಞಾನ ಸ್ವಲ್ಪವೂ ಇರಲಾರದು. ಇನ್ನು ಮೇಲೆ ನೀನು ನಮ್ಮ ಖರನ ಜತೆಯಲ್ಲಿರು. ಅವನು ನಿನಗೆ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುತ್ತಾನೆ. ಹದಿನಾಲ್ಕು ಸಾವಿರ ರಾಕ್ಷಸರಿಗೆ ಅವನನ್ನು ನಾಯಕನಾಗಿ ಮಾಡಿ, ದೂಷಣನು ಅವನ ಜತೆಯಲ್ಲಿರುವಂತೆ ಹೇಳುತ್ತೇನೆ, ಅವರನ್ನು ದಂಡಕಾರಣ್ಯದ ರಕ್ಷಣೆಗೆ ಕಳುಹಿಸುತ್ತೇನೆ. ನೀನೂ ಅವರೊಂದಿಗೆ ಹೋಗಿ ಅಲ್ಲೇ ಸ್ವೇಚ್ಛೆಯಾಗಿ ವಿಹರಿಸಿಕೊಂಡಿರು. ಅವರೆಲ್ಲಾ ನಿನಗೆ ವಿಧೇಯರಾಗಿರುವಂತೆ ಅಪ್ಪಣೆ ಮಾಡುತ್ತೇನೆ" ಎಂದನು ರಾವಣ.

## ೧. ಮೇಘನಾದ ವಿಜಯ



ಅದರಂತೆ ಶೂರ್ಪನಖಿ ಖರದೂಷಣರೊಂದಿಗೆ ದಂಡಕಾರಣ್ಯಕ್ಕೆ ಹೋಗಿ ಅಲ್ಲಿ ಸುಖವಾಗಿ ಕಾಲ ಕಳೆದುಕೊಂಡಿದ್ದಳು.

ತರುವಾಯ ರಾವಣನು ನಿಕುಂಬಿಲ ವನಕ್ಕೆ ಹೋಗಿ ಅಲ್ಲಿ ಯಜ್ಞಮಾಡಿಕೊಂಡಿದ್ದ ತನ್ನ ಕುಮಾರನಾದ ಮೇಘನಾದನನ್ನು ನೋಡಿ, ಅತ್ಯಾನಂದದಿಂದ ಆಲಿಂಗಿಸಿಕೊಂಡು, "ಕಂದಾ! ಇಲ್ಲಿ ಏನು ವಿಶೇಷ ಕಾರ್ಯ ಮಾಡುತ್ತಿರುವೆಯಪ್ಪಾ? ಏನೋ ಬಹುದೊಡ್ಡ ಯಜ್ಞ ಕಾರ್ಯದ ಹಾಗೆ ಕಾಣುತ್ತಿದೆ. ಎಂತಹ ಯಜ್ಞವಿದು?" ಎಂದು ಕೇಳಿದನು.

ಅವನ ಪ್ರಶ್ನೆಗೆ ಗುರು ಶುಕ್ರಾಚಾರ್ಯನೇ ಉತ್ತರ ಕೊಟ್ಟನು. "ರಾವಣೇಶ್ವರಾ, ನಿನ್ನ ಈ ಕುಮಾರಪ್ರವರನು ಏಳು ಯಜ್ಞಗಳನ್ನು ಮಾಡಲು ತೊಡಗಿದ್ದಾನೆ. ಅಗ್ನಿಷ್ಟೋಮ, ಅಶ್ವಮೇಧ, ರಾಜಸೂಯ, ಗೋಮೇಧ, ವೈಷ್ಣವ ಎಂಬ ಯಜ್ಞಗಳಲ್ಲದೆ ಅತ್ಯಂತ ದುರ್ಲಭವಾದ ಮಹೇಶ್ವರ ಯಜ್ಞವನ್ನು ಮಾಡಿ ಶಿವನನ್ನು ಪ್ರತ್ಯಕ್ಷಪಡಿಸಿ, ಕಾಮಗಮನವಿರುವ ರಥವನ್ನೂ, ಎಲ್ಲೆಲ್ಲೂ ಕತ್ತಲೆಯನ್ನುಂಟುಮಾಡುವ ಮಾಯವನ್ನೂ, ಶಕ್ತಿಯುತವಾದ ಧನುರ್ಬಾಣಗಳನ್ನೂ ವರವಾಗಿ ಪಡೆದಿದ್ದಾನೆ. ಈಗ ಮಾಡುತ್ತಿರುವುದು ಏಳನೆಯ ಕೊನೆಯ ಯಜ್ಞ. ಇದಾಗಿಬಿಟ್ಟರೆ ಇವನನ್ನು ಇದಿರಿಸುವವರು ಮೂರು ಲೋಕಗಳಲ್ಲಿಯೂ ಯಾರೂ ಇರಲಾರರು."

ಶುಕ್ರಾಚಾರ್ಯನು ಹೇಳಿದ ಈ ಮಾತುಗಳಿಂದ ರಾವಣನಿಗೆ ಸ್ವಲ್ಪವೂ ತೃಪ್ತಿಯಾಗಲಿಲ್ಲ. "ನೀವು ಮಾಡಿಸಿದ ಕೆಲಸ ಏನೇನೂ ಚೆನ್ನಾಗಿಲ್ಲ. ಇದೆಲ್ಲಾ ನಮ್ಮ ಗೌರವಕ್ಕೆ ಸಲ್ಲದ ಕಾರ್ಯಗಳು. ನಮ್ಮ ಗುರುಗಳಾದ ನೀವು ನಮ್ಮ ಜನ್ಮ ಶತ್ರುಗಳಾದ ಇಂದ್ರಾದಿಗಳನ್ನು ಅರ್ಚಿಸಲಿಕ್ಕೆ ಎಷ್ಟೋ ದ್ರವ್ಯಗಳನ್ನು ನಷ್ಟಪಡಿಸಿದಿರಿ. ಇಷ್ಟರವರೆಗೆ ಸಂಪಾದಿಸಿದ ಪುಣ್ಯವೇ ಸಾಕು" ಎಂದು ಹೇಳಿ ರಾವಣನು ಮೇಘನಾದನನ್ನು ತನ್ನೊಂದಿಗೆ ಕರೆದುಕೊಂಡು ಹೋದನು.

ಆಗ ವಿಭೀಷಣನು ರಾವಣನಿಗೆ ಒಂದು ದುರ್ವಾರ್ತೆ ಹೇಳಿದನು. ರಾವಣನಿಗೆ ತಂಗಿಯ ಮನೆಯಲ್ಲಿರುವ ಕುಂಭೀನಸೆ ಎಂಬ ಹುಡುಗಿ ರಾವಣನ ಮನೆಯಲ್ಲಿ ಬೆಳೆಯುತ್ತಿದ್ದಳು. ರಾವಣನ ತಾಯಿಗೆ ದೊಡ್ಡಪ್ಪನಾದ ಮಾಲ್ಯವಂತನ ಮಗಳ ಮಗಳು ಈ ಕುಂಭೀನಸೆ. ಮಧು ಎಂಬ ರಾಕ್ಷಸನು ಬಂದು ಭವನದೊಳಗೆ ಯಾರೂ ಇಲ್ಲದ ಸಮಯ ಹೊಂಚು ಹಾಕಿ ಕುಂಭೀನಸೆಯನ್ನು ಎತ್ತಿಕೊಂಡು ಹೋದನು. ಅದು ರಾವಣನು ದಿಗ್ವಿಜಯಕ್ಕೆ ಹೋದ ಸಮಯವಾಗಿತ್ತು. ಕುಂಭಕರ್ಣನು ಮೈಯರಿವಿಲ್ಲದೆ, ಬಾಹ್ಯ ಪ್ರಪಂಚದ ಗೊಡವೆ ತಿಳಿಯದೆ ನಿದ್ರೆಯಲ್ಲೇ ಮುಳುಗಿ ಹೋಗಿದ್ದನು. ವಿಭೀಷಣನು ನೀರಿನಲ್ಲಿ ಮುಳುಗಿ ತಪಸ್ಸು ಮಾಡಿಕೊಂಡಿದ್ದನು. ಹೀಗಾಗಿ ಮಧುವನ್ನು ಯಾರೂ ತಡೆಯುವವರಿರಲಿಲ್ಲ.

ತಾನು ಮಾತ್ರ ಎಷ್ಟು ಕನ್ಯೆಯರನ್ನು ಅಪಹರಿಸಿ ತಂದರೂ ಯಾವ ಭಾವನೆಗೂ ಒಳಗಾಗದ ರಾವಣನು, ತನ್ನ ತಂಗಿಯನ್ನು ಒಬ್ಬನು ಅಪಹರಿಸಿ ಕೊಂಡು ಹೋದನೆಂಬುದನ್ನು ತಿಳಿಯುತ್ತಲೇ ಕೋಪ ದಿಂದ ಉರಿದು ಹೋದನು. ಅವನು ಕುಂಭ ಕರ್ಣನನ್ನು ನಿದ್ರೆಯಿಂದ ಎಬ್ಬಿಸಿ, ರಾಕ್ಷಸ ವೀರರನ್ನು ಯುದ್ಧಕ್ಕೆ ಸಿದ್ಧಮಾಡಿಸಿ, ಮಧುವಿರುವ ಮಧು ಪುರದ ಮೇಲೆ ದಾಳಿ ಮಾಡಲು ಹೊರಟನು.

ತನ್ನ ಗಂಡನನ್ನು ಕೊಲ್ಲಲು ಅಣ್ಣನು ದೊಡ್ಡ ಸೇನೆಯೊಂದಿಗೆ ಬರುವನೆಂದು ತಿಳಿದು ಕುಂಭೀನಸೆ, ಅಪರಿಮಿತ ಭೀತಿಯಿಂದ ಅಳುತ್ತಾ ರಾವಣನ ಹತ್ತಿರ ಬಂದು "ಅಣ್ಣಾ, ನಿನ್ನ ಬಾವಯ್ಯ ಮಧು ವನ್ನು ಕೊಂದು ನನ್ನನ್ನು ವಿಧವೆ ಮಾಡುವೆಯಾ? ಬೇಡ ಬೇಡ!" ಎಂದು ಕೇಳಿಕೊಂಡಳು.

ರಾವಣನು ಕುಂಭೀನಸೆಯ ದೈನ್ಯವನ್ನು ನೋಡಿ ಕರಗಿ, "ಸರಿ, ಸುಮ್ಮನಿರು. ನಿನ್ನ ಗಂಡನನ್ನು ಕೊಲ್ಲುವುದಿಲ್ಲ ಬಿಡು. ಅವನು ಎಲ್ಲಿರುವನೆಂದು ತೋರಿಸು. ನಾನು ದೇವತೆಗಳನ್ನು ಜಯಿಸಲು ಸ್ವರ್ಗಕ್ಕೆ ಹೋಗುತ್ತಿದ್ದೇನೆ. ಅವನನ್ನು ಕೂಡಾ ನನ್ನೊಂದಿಗೆ ಕರೆದುಕೊಂಡು ಹೋಗುತ್ತೇನೆ" ಎಂದನು.

ಅಣ್ಣನ ಮಾತು ಕೇಳಿ ಕುಂಭೀನಸೆ ಆನಂದ ದಿಂದ ಗಂಡನಾದ ಮಧುವಿನ ಹತ್ತಿರ ಹೋಗಿ, "ನನ್ನ ಅಣ್ಣ ಈಗ ಶಾಂತನಾಗಿದ್ದಾನೆ. ದೇವತೆ ಗಳೊಂದಿಗೆ ಯುದ್ಧಮಾಡಲು ನಿನ್ನನ್ನೂ ಕರೆಯುತ್ತಿ ದ್ದಾನೆ. ಬೇಗ ಹೊರಡು. ನಮ್ಮ ಅಣ್ಣನ ಸ್ನೇಹವು ನಮಗೆ ಯಾವಾಗಲೂ ಒಳ್ಳೆಯದು. ಅದನ್ನು ಕೆಡಿಸಿಕೊಳ್ಳಬೇಡ" ಎಂದು ಹೇಳಿದಳು.

ಮಧು ರಾವಣನ ಬಳಿಗೆ ಬಂದು, ಅವನನ್ನು ಅರ್ಘ್ಯಪಾದ್ಯಗಳಿಂದ ಸತ್ಕರಿಸಿ ಬಹಳ ಮರ್ಯಾದೆ ಮಾಡಿ ಪೂಜಿಸಿದನು.



ರಾವಣನು ರಾತ್ರಿ ಪೂರಾ ತನ್ನ ಬಾವಯ್ಯನ ಆತಿಥ್ಯವನ್ನು ಸಂತೋಷದಿಂದ ಸ್ವೀಕರಿಸಿ ಮರುದಿನ ಹೊರಟು ವೈಶ್ರವಣನಿರುವ ಕೈಲಾಸದ ಭಾಗದ ಹತ್ತಿರ ಹೋಗಿ ಸೇರಿದನು. ಆಗ ಸಾಯಂಕಾಲ ವಾದುದರಿಂದ ರಾವಣನ ಸೇನೆ ಅಲ್ಲಿಯೇ ತಂಗಿತು.

ಆ ದಿನ ರಾತ್ರಿ ಒಳ್ಳೆಯ ಸೊಗಸಾದ ಬೆಳುದಿಂಗಳು ಚೆಲ್ಲಿಕೊಂಡಿತ್ತು. ಸುತ್ತುಮುತ್ತಲೂ ತಣ್ಣಗಿನ ಮಂದಮಾರುತವು ಸುಳಿದಾಡಿಕೊಂಡಿದ್ದಿತು. ಸುಂದರ ವಾದ ಮರಗಳ ನೆರಳಿನಲ್ಲಿ ಕಿನ್ನರಿಯರು ವೃಂದ ಗಾನ ಮಾಡಿಕೊಂಡಿದ್ದರು. ಕುಬೇರನ ಮಂದಿರ ದೊಳಗಿನಿಂದ ಅಪ್ಸರಸಿಯರು ಹಾಡುವ ಸ್ವರವು ಕರ್ಣಾನಂದಕರವಾಗಿ ಕೇಳಿಕೊಂಡಿದ್ದಿತು. ವಾತಾವರಣ ವೆಲ್ಲಾ ಸೊಗಸಾದ ಪುಷ್ಪಗಳ ಸುವಾಸನೆ ಇಡಿದಿದ್ದಿತು. ರಾವಣನು ಗುಡ್ಡದ ಮೇಲೆ ಕುಳಿತುಕೊಂಡು ಬೆಳು ದಿಂಗಳಿನಲ್ಲಿ ಕಾಣುವ ಸುತ್ತು ಮುತ್ತಲಿನ ದೃಶ್ಯ ಗಳನ್ನು ನೋಡುತ್ತಿದ್ದನು. ಅವನಲ್ಲಿ ವರ್ಣಿಸಲಾಗ



ನಾನು ನಿನಗೆ ಕೈಮುಗಿದು ಬೇಡುತ್ತೇನೆ. ನನ್ನ ಹತ್ತಿರ ಬಾ" ಎಂದನು.

ರಂಭೆ ಅವನ ಮಾತುಗಳನ್ನು ಕೇಳಿದೊಡನೆ ಭೀತಿಯಿಂದ ಕಂಪಿಸುತ್ತ, "ನೀವು ನನ್ನೊಂದಿಗೆ ಹೀಗೆಲ್ಲಾ ಮಾತಾಡಬಾರದು. ನನಗೆ ಬೇರೆಯವರು ಸಂಕಟವನ್ನುಂಟುಮಾಡಿದರೆ ರಕ್ಷಿಸಬೇಕಾದವರು ನೀವು. ನಾನು ನಿಮಗೆ ಸೊಸೆಗೆ ಸಮನಾದವಳು. ನಿಮ್ಮ ಅಣ್ಣನ ಮಗ ನಳಕೂಬರನು ನನಗಾಗಿ ಕಾಯುತ್ತಿದ್ದಾನೆ. ನಾನು ಅವನನ್ನು ಹೊರತು ಬೇರೆ ಯಾರನ್ನೂ ಪ್ರೇಮಿಸಲಾರೆ. ಪರಮ ಪೂಜ್ಯರಾದ ನಿಮಗೆ ನಮಸ್ಕಾರ ಮಾಡಿ ಬೇಡಿಕೊಳ್ಳುತ್ತೇನೆ" ಎಂದು ಕೇಳಿಕೊಂಡಳು.

ಆದರೂ ರಾವಣನು ಅವಳ ಮಾತನ್ನು ಲಕ್ಷ್ಯ ಮಾಡದೆ ಅವಳನ್ನು ಅವಮಾನಪಡಿಸಿದನು.

ರಂಭೆ ಮಹಾ ದುಃಖದಿಂದಲೂ, ಲಜ್ಜೆಯಿಂದಲೂ, ಭಯದಿಂದಲೂ ನಡುಗುತ್ತಾ ಹೋಗಿ ನಳಕೂಬರನ ಕಾಲಿನ ಮೇಲೆ ಬಿದ್ದು ರಾವಣನು ತನಗೆ ಮಾಡಿದ ಅನ್ಯಾಯವನ್ನು ಹೇಳಿಕೊಂಡು ಗೋಳಾಡಿದಳು.

ನಳಕೂಬರನು ಕೋಪಾವೇಶದಿಂದ ಅಂಜಲಿಯಲ್ಲಿ ನೀರನ್ನು ತೆಗೆದು, "ಈ ರಾವಣನು ಇನ್ನು ಮೇಲೆ ತನ್ನನ್ನು ಇಷ್ಟಪಡದ ಸ್ತ್ರೀಯನ್ನು ಅವಮಾನಿಸಿದ ಪಕ್ಷದಲ್ಲಿ ಅವನ ತಲೆ ಸಾವಿರ ಹೋಳುಗಳಾಗಿ ಹೋಗಲಿ" ಎಂದು ಗಟ್ಟಿಯಾಗಿ ಕೂಗಿ ಶಾಪ ಕೊಟ್ಟನು. ಅದು ಪ್ರತಿಧ್ವನಿಸಿತು.

ಆ ಶಾಪದ ಸಂಗತಿಯನ್ನು ಕೇಳಿದ ಮೇಲೆ ರಾವಣನು ತಟಸ್ಥನಾದನು. ಅವನು ಸೆರೆಹಿಡಿದು ತಂದ ಸ್ತ್ರೀಯರಲ್ಲಿ ಪತಿವ್ರತೆಯಾದವರನ್ನು ಮುಟ್ಟದೆ ಸುಮ್ಮನಿದ್ದನು. ಅಂಥವರೆಲ್ಲ ಆತ್ಮಾನಂದಗೊಂಡರು. ಅದು ಮೊದಲು ರಾವಣನು ಸ್ತ್ರೀಯರನ್ನು ಅವಮಾನಿಸುವುದನ್ನು ಬಿಟ್ಟನು.

ದಂತಹ ಉತ್ಸಾಹದೊಂದಿಗೆ ಏನೋ ಕೊರತೆಯಿರುವಂತೆ ಕಾಣುತ್ತಿತ್ತು.

ಆ ಸಮಯದಲ್ಲಿ ಅಪ್ಸರಸಿಯರಲ್ಲೆಲ್ಲಾ ಮೇಲಾದವಳಾದ ರಂಭಾದೇವಿ ನಿದ್ದೆಯಲ್ಲಿ ಮುಳುಗಿಕೊಂಡಿರುವ ರಾವಣನ ಸೇನೆಯ ಮಧ್ಯದಿಂದಾಗಿ ನಡೆಯುತ್ತ ಆ ಕಡೆಗೇ ಬಂದಳು. ಅವಳು ದಿವ್ಯಾಭರಣಗಳನ್ನು ಮೈತುಂಬ ಧರಿಸಿ, ಪುಷ್ಪಮಾಲಿಕೆಯನ್ನು ಹಾಕಿಕೊಂಡು ತಲೆಯಲ್ಲಿ ಮಂದಾರಗಳನ್ನು ಮುಡಿದು ಕಗ್ಗಿನ ಮುಸುಗು ಹಾಕಿಕೊಂಡು ಎರಡನೇ ಲಕ್ಷ್ಮೀದೇವಿಯ ಹಾಗೆ ಬರುವುದನ್ನು ನೋಡಿ, ರಾವಣನು ಕುಳಿತ ಸ್ಥಳದಿಂದ ಮೆಲ್ಲನೆ ಎದ್ದು ಹೋಗಿ ಅವಳ ಕೈಯನ್ನು ಹಿಡಿದು, "ಈಗ ನೀನು ಯಾರ ಬಳಿಗೆ ಹೋಗುತ್ತೀ? ಅಂತಹ ಅದೃಷ್ಟಶಾಲಿ ಯಾರು? ನಾನು ಅವನಿಗೇನೂ ಕಡಿಮೆಯವನಲ್ಲ. ಮೂರು ಲೋಕಗಳಲ್ಲಿಯೂ ನನ್ನನ್ನು ಮೀರಿಸುವನಿಲ್ಲ ಗೊತ್ತೇ? ಅಂತಹವನಾದ



ರಾವಣನು ಕೈಲಾಸದಿಂದ ಹೊರಟು ತನ್ನ ಸೈನ್ಯವನ್ನು ಸ್ವರ್ಗದ ಕಡೆಗೆ ನಡೆಸಿಕೊಂಡು ಹೋದನು. ಸ್ವರ್ಗದ ನಾಲ್ಕು ಕಡೆಗಳಲ್ಲಿಯೂ ರಾಕ್ಷಸ ಸೇನೆಗಳು ಮುತ್ತಿದ ಸಮಾಚಾರ ಕೇಳಿ ಇಂದ್ರನು ಗೆಲ್ಲುವ ನಂಬುಗೆ ಇಲ್ಲದವನಾದರೂ ದೇವಗಣಗಳಿಗೆ ಯುದ್ಧಕ್ಕೆ ಸಿದ್ಧವಾಗುವಂತೆ ಆಜ್ಞೆ ಮಾಡಿದನು.

ರಾವಣನ ವಿಷಯವು ಸಾಮಾನ್ಯವಲ್ಲವೆಂದು ಕೊಂಡು ಇಂದ್ರನು ವಿಷ್ಣುವಿನ ಬಳಿಗೆ ಹೋಗಿ "ಸ್ವರ್ಗದ ಮೇಲೆ ರಾವಣನು ದಂಡೆತ್ತಿಕೊಂಡು ಬಂದಿದ್ದಾನೆ. ನಾನೇನು ಮಾಡಬೇಕು? ಹಿಂದೆ ಎಂತೆಂತಹ ರಾಕ್ಷಸರೆಲ್ಲ ಸ್ವರ್ಗಕ್ಕೆ ದಾಳಿ ಮಾಡಿದಾಗ ನೀನು ಅವರನ್ನೆಲ್ಲ ಅವಲೀಲೆಯಿಂದ ಸೋಲಿಸಿರುವಿ. ಈಗ ನೀನು ಚಕ್ರಧಾರಿಯಾಗಿ ಬಂದು ರಾವಣನೊಂದಿಗೆ ಯುದ್ಧ ಮಾಡಿದರೆ ಸ್ವರ್ಗವು ಉಳಿದೀತು. ದೇವರ ದೇವಾ! ನಿನ್ನನ್ನೇ ಶರಣಾಗಿದ್ದೇನೆ. ಅಪ್ಪಣೆಯಾಗಲಿ" ಎಂದು ಕೈಮುಗಿದು ಹೇಳಿಕೊಂಡನು.

"ಇಂದ್ರಾ, ಈಗ ನಾನು ರಾವಣನೊಂದಿಗೆ ಯುದ್ಧ ಮಾಡುವಂತಿಲ್ಲ. ಅವನ ವರಬಲವು ಎಂತಹುದೆಂದು ತಿಳಿದಿದೆಯಷ್ಟೆ? ಅವನು ನನ್ನ ಕೈಯಲ್ಲಿ ಸಾಯುವವನಲ್ಲ. ಅವನ ಕಾಲವು ಇನ್ನೂ ಉಳಿದಿದೆ. ಪ್ರಸ್ತುತದಲ್ಲಿ ನೀನೇ ಅವನನ್ನು ಇದಿರಿಸು. ನೀನೇನೂ ಹೆದರಬೇಕಾಗಿಲ್ಲ" ಎಂದನು ವಿಷ್ಣು.

ಅಂತೂ ದೇವತೆಗಳಿಗೂ ರಾವಣನಿಗೂ ದೊಡ್ಡ ಯುದ್ಧವು ನಡೆಯಿತು. ರಾವಣನ ತಾತನಾದ ಸುಮಾಲಿ ರಾವಣನ ಸೈನ್ಯದ ನಾಯಕತ್ವ ವಹಿಸಿಕೊಂಡಿದ್ದನು. ಈ ಯುದ್ಧದಲ್ಲಿ ಸುಮಾಲಿ ಸಾವಿತ್ರನೆಂಬ ವಸುವಿನ ಕೈಯಲ್ಲಿ ಸತ್ತುಬಿದ್ದನು. ಆ ಸಂದರ್ಭದಲ್ಲಿ ರಾಕ್ಷಸ ಸೇನೆ ಕೂಡಾ ಭಾರಿ ಪೆಟ್ಟು ತಿಂದು ಹೈರಾಣಾಗಿ ಹೋಯಿತು. ಹತ್ತರಲ್ಲಿ ಒಂಬತ್ತರಷ್ಟು ರಾಕ್ಷಸರು ಸತ್ತುಹೋದರು. ಇಂದ್ರನು ದೊಡ್ಡ ಯುದ್ಧಮಾಡಿ ರಾವಣನನ್ನು ಜೀವದೊಂದಿಗೆ ಹಿಡಿದುಕೊಂಡನು. ಹೀಗಾಗುವುದೆಂದು ರಾವಣನು ನಂಬಿರಲಿಲ್ಲ.

ಈ ಸಂಗತಿಯನ್ನು ತಿಳಿದು ಮೇಘನಾದನು ತನ್ನ ಮಾಯೆಗಳನ್ನು ಪ್ರಯೋಗಿಸಿ, ಅದೃಶ್ಯನಾಗಿ ಯುದ್ಧ ಮಾಡುತ್ತ ಬಂದು ಇಂದ್ರನನ್ನು ಹಿಡಿದು, ಅವನ ಕೈಯಿಂದ ತಂದೆಯನ್ನು ಬಿಡಿಸಿಕೊಂಡು "ಯುದ್ಧ ಮುಗಿಯಿತು. ನಾವೇ ಗೆದ್ದಿದ್ದೇವೆ. ನಾವಿನ್ನು ಹೋಗಿಬಿಡೋಣ. ಇಗೋ ಇಂದ್ರನು ನಮಗೆ ಸಿಕ್ಕಿದ್ದಾನೆ. ಅಪ್ಪಾ, ಇನ್ನು ನೀವು ಯಥೇಚ್ಛೆಯಾಗಿ ಮೂರು ಲೋಕಗಳನ್ನೂ ಆಳಬಹುದು" ಎಂದನು.

ಹೀಗೆ ಮೇಘನಾದನು ಇಂದ್ರನನ್ನು ಹಿಡಿದುಕೊಂಡುದರಿಂದ ಇಂದ್ರಜಿತ್ತು ಎಂದು ಹೆಸರು ಪಡೆದನು. ರಾವಣನು ತನ್ನ ಮಗನನ್ನೂ, ಬಂದಿಯಾದ ಇಂದ್ರನನ್ನೂ ತೆಗೆದುಕೊಂಡು ಲಂಕೆಗೆ ಹಿಂದಿರುಗಿದನು.



ಇಂದ್ರನನ್ನು ಬಿಡಿಸಿಕೊಳ್ಳಲು ದೇವತೆಗಳು ಬ್ರಹ್ಮನನ್ನು ಮುಂದಿಟ್ಟುಕೊಂಡು ಲಂಕೆಗೆ ಹೋದರು. ಬ್ರಹ್ಮನು ಮಹಾಸಭೆಯಲ್ಲಿ ಮಂಡಿಸಿರುವ ರಾವಣನೊಂದಿಗೆ, "ನಿನ್ನ ಮಗನ ಪರಾಕ್ರಮವು ಬಹಳ ದೊಡ್ಡದು. ಅದನ್ನು ನೋಡಿ ನಾನು ಸಂತೋಷಿಸಿದ್ದೇನೆ. ಇಂದಿನಿಂದ ನಿನ್ನ ಮಗನು ಇಂದ್ರಜಿತ್ತುವೆಂದು ಪ್ರಖ್ಯಾತನಾಗಿ ಆಚಂದ್ರಾರ್ಕ ಸ್ಥಾಯಿಯಾಗುತ್ತಾನೆ. ಅವನನ್ನು ಜಯಿಸಲು ಯಾರಿಂದಲೂ ಆಗದು. ಅವನ ಸಹಾಯದಿಂದ ನೀನು ದೇವತೆಗಳನ್ನು ಜಯಿಸಿರುವೆ. ಮೇಘನಾದನು ದೇವತೆಗಳನ್ನು ಸಂತೋಷಪಡಿಸುವ ಯಜ್ಞಗಳನ್ನು ಮಾಡಿದವನಾದುದರಿಂದ, ಇನ್ನು ನೀನು ಇಂದ್ರನನ್ನು ಬಿಟ್ಟುಬಿಡಬೇಕು" ಎಂದನು.

"ಬ್ರಹ್ಮತಾತಾ, ಇಂದ್ರನನ್ನು ಬಿಡಲೇಬೇಕೆಂದಾದರೆ ನನಗೆ ಅಮರತ್ವವನ್ನು ನೀಡು" ಎಂದನು ಇಂದ್ರಜಿತ್ತು.

"ಕಂದಾ ಇಂದ್ರಜಿತ್ತೂ, ಯಾವ ಪ್ರಾಣಿಗೂ ಪರಿಪೂರ್ಣವಾದ ಅಮರತ್ವವು ಇಲ್ಲ" ಎಂದನು ಬ್ರಹ್ಮದೇವ.

"ಹಾಗಿದ್ದರೆ ನನಗೆ ಕೂಡಾ ಪರಿಪೂರ್ಣವಾದ ಅಮರತ್ವವು ಬೇಡ. ನಾನು ನಿನಗೆ ತೃಪ್ತಿಯಾಗುವ ಹಾಗೆ ದಿನಾ ಅಗ್ನಿಯನ್ನು ಹವಿಸ್ಸುಗಳಿಂದಲೂ ಮಂತ್ರಗಳಿಂದಲೂ ಅರ್ಚಿಸುತ್ತೇನೆ. ನಾನು ಯುದ್ಧಕ್ಕೆ ಹೊರಡುವ ಮೊದಲು ಕುದುರೆಗಳನ್ನು ಹೂಡಿದ ರಥವು ಅಗ್ನಿಕುಂಡದಿಂದ ಬರಬೇಕು. ಆ ರಥದ ಮೇಲೆ ನಾನು ಕುಳಿತಿರುವಷ್ಟು ಹೊತ್ತೂ ನನಗೆ ಅಮರತ್ವವಿರಬೇಕು. ಇದೇ ನಾನು ಕೇಳಿಕೊಳ್ಳುವ ವರ. ನಾನು ಅಗ್ನಿಯನ್ನು ಅರ್ಚಿಸುವ ಕೆಲಸ ಪೂರ್ತಿಯಾಗುವ ಮೊದಲು ಸಾಯುವುದಾವರೆ ಸಾಯುತ್ತೇನೆ. ಇದನ್ನಾದರೂ ದಯಮಾಡಿ ನನಗೆ ಅನುಗ್ರಹಿಸು ತಾತಾ" ಎಂದು ಕೇಳಿಕೊಂಡನು ಇಂದ್ರಜಿತ್ತು.

ಬ್ರಹ್ಮನು ಅದಕ್ಕೆ ಹಾಗೆಯೇ ಆಗಲೆಂದು ಹೇಳಿದ ಮೇಲೆ ಇಂದ್ರನಿಗೆ ಬಿಡುಗಡೆಯಾಯಿತು. ಇಂದ್ರನೊಂದಿಗೆ ದೇವತೆಗಳೆಲ್ಲಾ ತಾತ್ಕಾಲಿಕವಾದ ಸಂತೋಷದಿಂದ ಸ್ವರ್ಗವನ್ನು ಸೇರಿಕೊಂಡು ಕಾಲ ನಿರೀಕ್ಷೆಯಲ್ಲಿದ್ದರು.

ಯುದ್ಧೋನ್ಮಾದದಲ್ಲಿ ರಾವಣನು ಭೂಲೋಕದಲ್ಲಿ ಪರ್ಯಟನೆ ಮಾಡಿಕೊಂಡಿದ್ದಾಗ ಅವನಿಗೆ ಕೆಲವು ಅಪಜಯಗಳು ಕೂಡಾ ಉಂಟಾದುವು. ಅವುಗಳ ವಿಷಯವನ್ನು ಕೂಡಾ ಅಗಸ್ತ್ಯ ಮಹಾಮುನಿ ರಾಮನಿಗೆ ಹೇಳಿದನು.

ಸಾವಿರ ಕೈಗಳಿರುವ ಕಾರ್ತವೀರ್ಯಾರ್ಜುನನನ್ನು ಗೆಲ್ಲಬೇಕೆಂದು ರಾವಣನು ತನ್ನ ರಾಕ್ಷಸ ಪರಿವಾರವನ್ನು ಕರೆದುಕೊಂಡು ಮಾಹಿಷ್ಮತೀ ನಗರಕ್ಕೆ ಹೋದನು. ಆ ದಿನ ಕಾರ್ತವೀರ್ಯಾರ್ಜುನನು ತನ್ನ ಹೆಂಡಂದಿರೊಂದಿಗೆ ನರ್ಮದಾ ನದಿಯಲ್ಲಿ

ಜಲಕ್ರೀಡೆಯಾಡಲು ಹೊರಟು ಹೋಗಿರುವನೆಂದು ರಾವಣನಿಗೆ ಗೊತ್ತಾಯಿತು.

ರಾವಣನು ಸಪರಿವಾರನಾಗಿ ತಾನು ಕೂಡಾ ನರ್ಮದಾ ನದಿಗೆ ಹೋಗಿ ಅಲ್ಲಿ ಶಿವಪೂಜೆ ಮಾಡಲು ನದೀ ತೀರದಲ್ಲಿ ಕುಳಿತನು. ಅವನ ಮಂತ್ರಿಗಳು ಪೂಜೆಗಾಗಿ ಹೂಗಳನ್ನು ತಂದು ರಾವಣನ ಹತ್ತಿರ ದೊಡ್ಡ ರಾಶಿ ಹಾಕಿದರು.

ರಾವಣನು ತನ್ನೊಂದಿಗೆ ಯಾವಾಗಲೂ ಇಟ್ಟು ಕೊಂಡಿದ್ದ ಬಂಗಾರದ ಶಿವಲಿಂಗವನ್ನು ಒಂದು ಮಣ್ಣಿನ ದಿಬ್ಬದಲ್ಲಿಟ್ಟು ಅರ್ಚನೆ ಮಾಡಿ, ಸ್ತುತಿ ಹಾಡುತ್ತಾ ನರ್ತಿಸಲು ತೊಡಗಿದನು.

ನರ್ಮದಾ ನದಿ ಮೂಡು ದಿಕ್ಕಿನಿಂದ ಪಡು ವಣಕ್ಕೆ ಪ್ರವಹಿಸುತ್ತಿತ್ತು. ಅಂತಹ ನದಿ ಈಗ ಇದ್ದಕ್ಕಿದ್ದ ಹಾಗೆ ಪಡುವಣದಿಂದ ಮೂಡು ದಿಕ್ಕಿಗೆ ಪ್ರವಹಿಸಲು ತೊಡಗಿತು. ಅಷ್ಟೇ ಅಲ್ಲದೆ ನಿಮಿಷ ನಿಮಿಷಕ್ಕೂ ಉಕ್ಕುತ್ತಾ ಬರುತ್ತಿತ್ತು. ರಾವಣನು ಪೂಜಿಸುವ ಪುಷ್ಪಗಳೆಲ್ಲ ಆ ಉಕ್ಕು ಪ್ರವಾಹ ದೊಂದಿಗೆ ತೇಲಿ ಹರಿಡಿ ಹೊಡೆದುಕೊಂಡು ಹೋದುವು. ಥಕ್ಕನೆ ರಾವಣನು ಅತ್ಯಾಶ್ಚರ್ಯ ದಿಂದ ಸುತ್ತಲೂ ನೋಡುತ್ತಾ ಕೆಲವು ಕ್ಷಣಕಾಲ ಹಾಗೆಯೇ ನಿಂತನು.

ಏನೋ ಹೊಳೆದಂತೆ ರಾವಣನು ಚಿಟಿಕೆ ಹೊಡೆದು ಶುಕಸಾರಣರನ್ನು ಕರೆದು, ನರ್ಮದಾ ನದಿ ಇದಿರಾಗಿ ಪ್ರವಹಿಸಲು ಕಾರಣವೇನೆಂದು ನೋಡಿಬರಲು ಕಳುಹಿಸಿದನು.

ಅವರು ಹೋಗಿ ನೋಡಿದಾಗ ಕಾರ್ತವೀರ್ಯಾ ರ್ಜುನನು ತನ್ನ ಪತ್ನಿಯರೊಂದಿಗೆ ನಗುತ್ತ ಕಲೆ ಯುತ್ತ ಜಲಕ್ರೀಡೆಯಾಡುವ ದೃಶ್ಯ ಕಂಡಿತು. ಅವನು ತನ್ನ ಸಾವಿರ ಕೈಗಳಿಂದ ನದಿಯ ಪ್ರವಾಹ ವನ್ನು ಅಡ್ಡಗಟ್ಟಿ ನದಿ ಉಕ್ಕುತ್ತ ಇದಿರು ಪ್ರವಹಿ ಸುವ ಹಾಗೆ ಮಾಡಿದ್ದನು.



ಅದನ್ನು ನೋಡಿ ಶುಕಸಾರಣರು ಬೆರಗಾಗಿ ಹಿಂದಿರುಗಿ ಬಂದು ಈ ಸಂಗತಿಯನ್ನು ರಾವಣ ನೊಡನೆ ಹೇಳಿದರು. ಅವರು ವರ್ಣಿಸಿದ 'ಮಹಾ ವೃಕ್ಷ'ದಂತಹ ಮನುಷ್ಯ ಕಾರ್ತವೀರ್ಯಾರ್ಜುನನೇ ಆಗಿರಬೇಕೆಂದು ತಿಳಿದು ರಾವಣನು ಯುದ್ಧಕ್ಕೆ ಹೊರಟು, ಆ ಕಡೆಯಲ್ಲಿದ್ದ ಕಾರ್ತವೀರ್ಯಾರ್ಜುನನ ಮಂತ್ರಿಗಳೊಂದಿಗೆ, "ರಾವಣನು ಯುದ್ಧಕ್ಕೆ ಕರೆಯು ತ್ತಿದ್ದಾನೆಂದು ಜಲಕ್ರೀಡೆಯಲ್ಲಿರುವ ನಿಮ್ಮ ರಾಜ ನೊಂದಿಗೆ ಹೇಳಿರಿ" ಎಂದನು.

"ಯುದ್ಧಕ್ಕೆ ಒಳ್ಳೇ ಸಮಯ ನೋಡಿ ಕರೆಯುವೆ ಯಲ್ಲಾ! ರಾಜನು ಸ್ತ್ರೀಯರೊಂದಿಗೆ ಜಲಕ್ರೀಡೆ ಯಲ್ಲಿರುವಾಗ ಯುದ್ಧ ಮಾಡಲು ಕರೆಯುವಿ ಯೇನು? ನಾಳೆ ಬಂದು ನಿನ್ನ ಕೈಗಳ ತೀಟೆ ತೀರಿಸಿಕೋ" ಎಂದರು ಮಂತ್ರಿಗಳು.

ರಾವಣನು ಆಗಲೇ ಯುದ್ಧ ಬೇಕೆಂದು ಹಟ ಹಿಡಿದನು. ಹಾಗಾದರೆ ಮೊದಲು ತಮ್ಮೊಂದಿಗೆ

ಯುದ್ಧ ಮಾಡುವಂತೆ ಮಂತ್ರಿಗಳು ಹೇಳಿ ಸಿದ್ಧ ರಾದರು. ಆ ಯುದ್ಧ ಬೇಗನೇ ಮುಗಿಯಿತು. ಹೇಗೆಂದರೆ, ಉಭಯ ಪಕ್ಷಗಳಿಗೂ ಯುದ್ಧವು ತೊಡಗಿತು. ರಾಕ್ಷಸರು ವಿಜೃಂಭಿಸಿ ಕಾರ್ತವೀರ್ಯಾರ್ಜುನನ ಪರಿವಾರದ ಅನೇಕರನ್ನು ಕೊಂದರು. ಕೆಲವರನ್ನು ತಿಂದೇ ತೀರಿಸಿಬಿಟ್ಟರು. ಈ ಯುದ್ಧದ ಕೋಲಾಹಲವನ್ನು ಕೇಳಿ ಕಾರ್ತವೀರ್ಯಾರ್ಜುನನು, ತನ್ನ ಹೆಂಡತಿಯರಿಗೆ ಭಯಪಡಬೇಡಿರೆಂದು ಹೇಳಿ, ಐನೂರು ಕೈಗಳಲ್ಲಿ ಗದೆಗಳನ್ನೆತ್ತಿಕೊಂಡು ತಿರುಗಿಸುತ್ತ, ಬಹು ವೇಗದಿಂದ ಯುದ್ಧ ನಡೆಯುವ ಜಾಗಕ್ಕೆ ಬಂದನು.

ಪ್ರಹಸ್ತನು ಮುಸಲಾಯುಧ ತಿರುಗಿಸುತ್ತ ಅವನಿಗೆ ಅಡ್ಡ ನಿಂತನು. ಕಾರ್ತವೀರ್ಯಾರ್ಜುನನು ಪ್ರಹಸ್ತನ ಮುಸಲವನ್ನು ಗದಾಘಾತದಿಂದ ಮುರಿದು ಅವನನ್ನು ಹೊಡೆದು ನೆಲಕ್ಕೆ ಉರುಳಿಸಿದನು. ಆಗ ಮಾರೀಚ, ಶುಕಸಾರಣ, ಧೂಮ್ರಾಕ್ಷ, ಮಹೋದರ ಮೊದಲಾದವರು ಅಲ್ಲಿ ನಿಲ್ಲಲಾಗದೆ ದೂರ ದೂರ ಓಡಿದರು.

ಆಮೇಲೆ ರಾವಣನು ಕಾರ್ತವೀರ್ಯಾರ್ಜುನನ ಮುಂದೆ ಬಂದನು. ಇಬ್ಬರೂ ಖಾಡಾಖಾಡೀ ಯುದ್ಧಕ್ಕೆ ತೊಡಗಿ ಗದೆಗಳಿಂದ ಒಬ್ಬರನ್ನೊಬ್ಬರು ಹೊಡೆದರು. ಇಬ್ಬರೂ ಬೆಟ್ಟಗಳ ಹಾಗೆ ಗಟ್ಟಿಯಾಗಿಯೇ ಇದ್ದರು. ಕಟ್ಟಕಡೆಗೆ ಕಾರ್ತವೀರ್ಯಾರ್ಜುನನು ಅನೇಕ ಗದೆಗಳನ್ನು ಒಮ್ಮೆಲೇ ಮಹಾ ಬಲದಿಂದ ಹೊಡೆಯಲು ಗದೆಗಳೆಲ್ಲಾ ಪುಡಿಯಾದವು. ಆದರೆ ಆ ಪೆಟ್ಟುಗಳಿಂದ ರಾವಣನು ತತ್ತರಿಸಿ ಬಿದ್ದುಬಿಟ್ಟನು.

ಕೂಡಲೇ ಕಾರ್ತವೀರ್ಯಾರ್ಜುನನು ರಾವಣನನ್ನು ಹಿಡಿದು ಕಟ್ಟಿ ತನ್ನ ಪಟ್ಟಣಕ್ಕೆ ಎಳೆದು ಹೋದನು.

ಈ ಸಂಗತಿ ಸ್ವರ್ಗದಲ್ಲಿದ್ದ ಪುಲಸ್ತ್ಯ ಬ್ರಹ್ಮನಿಗೆ ಗೊತ್ತಾಯಿತು. ಅವನು ಗಾಬರಿಯಾಗಿ ಓಡುತ್ತ ಮಾಹಿಷ್ಮತಿಗೆ ಬಂದನು. ಕಾರ್ತವೀರ್ಯಾರ್ಜುನನು ಅತ್ಯಾದರದಿಂದಲೂ ಭಕ್ತಿಯಿಂದಲೂ ಅವನನ್ನು ಉಪಚರಿಸಿ, ಬಂದ ಸಮಾಚಾರವೇನೆಂದು ಕೇಳಿದನು.

"ಅಪ್ಪಾ, ಲೋಕಗಳನ್ನೆಲ್ಲಾ ಜಯಿಸಿ ಅಜೇಯನೆನಿಸಿಕೊಂಡ ನನ್ನ ಮೊಮ್ಮಗನನ್ನು ನೀನು ಗೆದ್ದುಬಿಟ್ಟೆ. ಏನು ನಿನ್ನ ಪರಾಕ್ರಮ ! ಇನ್ನು ಅವನನ್ನು ಬಿಟ್ಟುಬಿಡು" ಎಂದನು ಪುಲಸ್ತ್ಯ.

ಕಾರ್ತವೀರ್ಯಾರ್ಜುನನು ಮರುಮಾತಾಡದೆ ರಾವಣನ ಕಟ್ಟುಗಳನ್ನು ಬಿಚ್ಚಿ, ಅವನೊಂದಿಗೆ ಅಗ್ನಿ ಸಾಕ್ಷಿಯಾಗಿ ಅಹಿಂಸಾರೂಪದ ಸ್ನೇಹವನ್ನು ಮಾಡಿಕೊಂಡು, ವಸ್ತ್ರಾಭರಣಗಳನ್ನು ಕಾಣಿಕೆ ಕೊಟ್ಟು ಗೌರವದಿಂದ ಕಳುಹಿಸಿಕೊಟ್ಟನು.






ರಾವಣನು ಕಾರ್ತವೀರ್ಯಾರ್ಜುನನ ಕೈಗೆ ಸಿಕ್ಕಿಬಿದ್ದು, ಪುಲಸ್ತ್ಯನಿಂದ ಬಿಡುಗಡೆ ಹೊಂದಿದ ಮೇಲೆಯಾದರೂ ಸ್ವಲ್ಪ ಕೂಡಾ ಗರ್ವವನ್ನು ತಗ್ಗಿಸಿಕೊಂಡವನಾಗಿ ಕಾಣಲಿಲ್ಲ. ಅವನ ಸ್ನೇಹದಿಂದ ಇನ್ನಷ್ಟು ಬಲಿಷ್ಠನಾದೆನೆಂಬ ಹೆಮ್ಮೆಯಿಂದ ಲೋಕದೊಳಗೆ ತಿರುಗುತ್ತಾ, ಬಲವಂತರಾದ ರಾಕ್ಷಸರೊಂದಿಗೂ ಮಾನವರೊಂದಿಗೂ ಯುದ್ಧಕ್ಕೆ ಸವಾಲು ಮಾಡಿಕೊಂಡೇ ಇದ್ದನು. ರಾವಣನು ಬಂದನೆಂದರೆ ಎಲ್ಲರಿಗೂ ನಡುಕವೇ.

ಹಾಗೆ ಒಂದು ಸಾರಿ ಅವನು ಕಿಷ್ಕಿಂಧೆಗೆ ಹೋಗಿ ಅಲ್ಲಿ ರಾಜನಾಗಿರುವ ವಾಲಿಯನ್ನು ಯುದ್ಧಕ್ಕೆ ಬರುವಂತೆ ಆಹ್ವಾನಿಸಿದನು.

ಆಗ ವಾಲಿಯ ಮಂತ್ರಿಯಾದ ತಾರನು ರಾವಣನೊಂದಿಗೆ, "ಪ್ರಸ್ತುತದಲ್ಲಿ ನಮ್ಮ ರಾಜನಾದ ವಾಲಿ ಕಿಷ್ಕಿಂಧೆಯಲ್ಲಿಲ್ಲ. ಉಳಿದ ವಾನರರು ನಿನ್ನೊಂದಿಗೆ ಯುದ್ಧಕ್ಕೆ ನಿಲ್ಲುವಷ್ಟು ಬಲಿಷ್ಠರೇನಲ್ಲವಷ್ಟೆ? ವಾಲಿ ಸಂಧ್ಯಾವಂದನೆ ಮಾಡಲಿಕ್ಕಾಗಿ ನಾಲ್ಕು ದಿಕ್ಕಿನ ಸಮುದ್ರ ತೀರಗಳವರೆಗೆ ಹೋಗಿರುತ್ತಾನೆ. ಅಕೋ ಅಲ್ಲಿರುವ ಎಲುಬುಗಳ ರಾಶಿಯನ್ನು ನೋಡು. ಅದು ವಾಲಿಯ ಕೈಯಲ್ಲಿ ಸತ್ತುಹೋದವರ ಎಲುಬುಗಳ ರಾಶಿ. ನಿನಗೆ ಕೂಡಾ ಆ ರಾಶಿಯಲ್ಲಿ ಸೇರಬೇಕೆಂದಿದ್ದರೆ, ಸ್ವಲ್ಪ ಹೊತ್ತು ತಾಳು. ವಾಲಿ ಬೇಗದಲ್ಲೇ ಬಂದು ಬಿಡುತ್ತಾನೆ. ತಾಳಲು ಸಾಧ್ಯವಿಲ್ಲದಷ್ಟು ಅವಸರವಿದ್ದರೆ, ದಕ್ಷಿಣ ಸಮುದ್ರ ತೀರಕ್ಕೆ ಹೋಗಿ ನೋಡಿದರೆ ಈಗ ವಾಲಿ ಅಲ್ಲಿಯೇ ಇರುತ್ತಾನೆ, ಬೇಗದಲ್ಲೇ ನಿನ್ನ ಕಥೆ ಮುಗಿಸಿಬಿಡುತ್ತಾನೆ" ಎಂದನು.

ರಾವಣನು ತಾರನ ಉದ್ಧಟತನದ ಮಾತುಗಳಿಗೆ ಸಿಟ್ಟಿನಿಂದ ಬೈದು, ತನ್ನ ಪುಷ್ಪಕ ವಿಮಾನದ ಮೇಲೆ ಏರಿಕೊಂಡು ದಕ್ಷಿಣ ಸಮುದ್ರ ತೀರದ ಕಡೆಗೆ ಹಾರಿಸಿಕೊಂಡು ಹೋದನು.

ಅಲ್ಲಿ ಅವನಿಗೆ ಮೇರು ಪರ್ವತದಂತೆ ಜಪ ಮಾಡಿಕೊಂಡು ಕುಳಿತಿರುವ ವಾಲಿ ಕಾಣಿಸಿದನು. ಆಗಾಗ ವಾಲಿ ಜಪದಲ್ಲಿ ಮುಚ್ಚಿದ ಕಣ್ಣುಗಳನ್ನು

ತೆರೆಯುತ್ತ, ಸಮುದ್ರದ ನೀರನ್ನೆತ್ತಿ ಸೂರ್ಯನಿಗೆ ಅರ್ಘ್ಯವನ್ನು ಬಿಡುತ್ತಿದ್ದನು.

ರಾವಣನು ತುಸು ದೂರದಲ್ಲಿ ಪುಷ್ಪಕ ವಿಮಾನದಿಂದ ಇಳಿದು, ವಾಲಿಯನ್ನು ಹಿಂದಿನ ಬದಿಯಲ್ಲಿ ಹಿಡಿದುಕೊಳ್ಳುವ ಉದ್ದೇಶದಿಂದ ಸಪ್ಪಳವಾಗದಂತೆ ನಡೆದು ವಾಲಿಯನ್ನು ಸಮೀಪಿಸಿದನು.

ಆಗ ವಾಲಿ ನೀರಿನಲ್ಲಿ ಬಿದ್ದ ಪ್ರತಿಬಿಂಬ ನೋಡಿ ಥಕ್ಕನೆ ಹಿಂದಿರುಗಿ ರಾವಣನನ್ನು ಗುರುತಿಸಿ, ಅವನ ಉದ್ದೇಶವನ್ನು ತಿಳಿದುಕೊಂಡು ತಿಳಿಯದವನಂತೆ ಸುಮ್ಮನಿದ್ದುಬಿಟ್ಟನು.

ರಾವಣನು ತೀರಾ ಸಮೀಪಕ್ಕೆ ಬಂದ ಕೂಡಲೇ ವಾಲಿ ಗರುತ್ಮಂತನು ಹಾವನ್ನು ಹಿಡಿದ ಹಾಗೆ ಗಬಕ್ಕನೆ ರಾವಣನನ್ನು ಹಿಡಿದು ಎಳೆದು ಕಂಕುಳಲ್ಲಿ ಒತ್ತಿಕೊಂಡು, ರಿವ್ವನೆ ಆಕಾಶದ ಮೇಲೆ ಹಾರಿ ಹೋದನು. ರಾವಣನ ಕಾಲುಗಳು ಚಡಪಡಿಸಿದುವೇ ಹೊರತು ಶಬ್ದ ಹೊರಡಲಿಲ್ಲ. ರಾವಣನನ್ನು ಬಿಡಿಸಿಕೊಳ್ಳಲು ಅವನ ಮಂತ್ರಿಗಳು ಕೂಗುತ್ತಾ, ವಾಲಿಯ ಹಿಂದೆಯೇ ಹಾರಿಹೋಗುತ್ತ, ವಾಲಿಯ ವೇಗವನ್ನು ಹಿಡಿಯಲಾಗದೆ, ಹಿಂದಿರುಗಿಬಿಟ್ಟರು. ಅದೇ ಅವರ ಪುಣ್ಯದ ಫಲದಂತಾಯಿತು. ಇಲ್ಲದಿದ್ದರೆ ವಾಲಿಯ ಏಟಿನಿಂದ ಅವರೆಲ್ಲ ಪ್ರಾಣ ಕಳೆದುಕೊಳ್ಳಬೇಕಿತ್ತು.

ವಾಲಿ ರಾವಣನನ್ನು ಕಂಕುಳಲ್ಲಿ ಅಮುಕಿಕೊಂಡು ಹಾರುತ್ತಾ ಹೋಗಿ ಪಶ್ಚಿಮ ಸಮುದ್ರದ ತೀರದಲ್ಲಿ ಇಳಿದು, ಅಲ್ಲಿ ಸ್ನಾನಮಾಡಿ ಅರ್ಘ್ಯ ಬಿಟ್ಟು ಸಂಧ್ಯಾವಂದನೆ ಮಾಡಿ, ಅಲ್ಲಿಂದ ಹಾಗೆಯೇ ಪೂರ್ವ ಸಮುದ್ರ ತೀರಕ್ಕೆ ಹೋದನು. ಹೀಗೆ ಎಲ್ಲಾ ಸಮುದ್ರಗಳ ತೀರದಲ್ಲಿ ಸಂಧ್ಯಾವಂದನೆಯನ್ನೂ ಅರ್ಘ್ಯಗಳನ್ನೂ ಮುಗಿಸಿಕೊಂಡು ವಾಲಿ ಕಂಕುಳಲ್ಲಿ ಸಿಕ್ಕಿಕೊಂಡಿರುವ ರಾವಣನನ್ನು ಲಕ್ಷ್ಯವೇ ಮಾಡದೆ, ಹಾಗೆಯೇ ಕಿಷ್ಕಿಂಧೆಗೆ ಹಿಂದಿರುಗಿ ಬಂದನು.

ಕಿಷ್ಕಿಂಧೆಯ ಉದ್ಯಾನವನದಲ್ಲಿ ರಾವಣನನ್ನು ಕೆಳಗಿಸಿ ನಗುತ್ತ, "ಏನಪ್ಪಾ ರಾವಣಾ! ಎಲ್ಲಿಂದ ಬರುತ್ತಿದ್ದಿ?" ಎಂದು ಕೇಳಿದನು ವಾಲಿ.





ರಾವಣನು ವಾಲಿಯೊಂದಿಗೆ ಕ್ಷಮೆ ಕೇಳಿಕೊಂಡು, "ನಿನ್ನಂತಹ ಬಲಶಾಲಿಯನ್ನೂ, ವೇಗಶಾಲಿಯನ್ನೂ ಈ ಸೃಷ್ಟಿಯಲ್ಲಿ ನಾನು ಇನ್ನೊಬ್ಬನನ್ನು ನೋಡಲಿಲ್ಲ. ನನ್ನಂಥವನನ್ನೇ ಹಿಡಿದುಕೊಂಡು ನಾಲ್ಕು ಸಮುದ್ರಗಳಲ್ಲಿಯೂ ಹಾರಿಕೊಂಡು ಹೋಗುವಷ್ಟು ಸಮರ್ಥನಾಗಿರುವೆ. ನಿನ್ನ ಶಕ್ತಿ ಅಪೂರ್ವ, ಅಪಾರ, ಅಸಾಮಾನ್ಯ. ನಾನು ನಿನ್ನೊಂದಿಗೆ ಅಗ್ನಿಸಾಕ್ಷಿಯಾಗಿ ಸ್ನೇಹವನ್ನು ಮಾಡಿಕೊಳ್ಳಬೇಕೆಂದಿದ್ದೇನೆ" ಎಂದು ಹೇಳಿದನು.

ವಾಲಿ ಅದಕ್ಕೆ ಒಪ್ಪಿ, ಅಗ್ನಿಯನ್ನು ಪ್ರಜ್ವಲಿಸಿದನು. ಇಬ್ಬರೂ ಪರಸ್ಪರ ಆಲಿಂಗಿಸಿ ಸ್ನೇಹ ಮಾಡಿಕೊಂಡರು.

ಹೀಗೆ ಭ್ರಾತೃ ಸ್ನೇಹದಿಂದ ರಾವಣನು ಒಂದು ತಿಂಗಳವರೆಗೆ ಸುಗ್ರೀವನು ಹೊಂದುವ ಎಲ್ಲಾ ಮರ್ಯಾದೆಗಳನ್ನೂ ಪಡೆದನು. ಆಮೇಲೆ ರಾವಣನ ಮಂತ್ರಿಗಳು ಬಂದು ರಾವಣನನ್ನು ಲಂಕೆಗೆ ಕರೆದುಕೊಂಡು ಹೋದರು.

ಅಗಸ್ತ್ಯನು ರಾಮನಿಗೆ ಈ ವೃತ್ತಾಂತವನ್ನು ಹೇಳಿ, "ರಾಮಾ, ನಿನ್ನ ಕೈಯಿಂದ ಒಂದೇ ಬಾಣದಿಂದ ಸತ್ತ, ಆ ವಾಲಿ ಎಂತಹ ಬಲವಂತನೆಂದು ಗೊತ್ತಾಯಿತಷ್ಟೆ ?" ಎಂದನು.

ಅದನ್ನು ಕೇಳಿ ರಾಮನು, "ಅಗಸ್ತ್ಯ ಮಹರ್ಷೀ, ವಾಲಿಯ ಬಲವೂ, ರಾವಣನ ಬಲವೂ ಅಪೂರ್ವವಾದುದೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ನನ್ನ ಉದ್ದೇಶದಲ್ಲಿ ಹನುಮಂತನು ಇವರಿಬ್ಬರಿಗಿಂತಲೂ ಹೆಚ್ಚಿನ ಬಲವಂತನೆಂದು ಕಾಣುತ್ತದೆ. ಅವನು ನೂರು ಯೋಜನ ದೂರದ ಸಮುದ್ರವನ್ನು, ಒಂದೇ ಹಾರಿಕೆಗೆ ಹಾರಿದ್ದು ಮಾತ್ರವಲ್ಲದೆ, ರಾವಣನ ಅಂತಃಪುರದೊಳಗೆ ಅವಲೀಲೆಯಾಗಿ ಪ್ರವೇಶಿಸಿ ಎಷ್ಟೋ ರಾಕ್ಷಸ ವೀರರನ್ನು ಒಬ್ಬಂಟಿಗನಾಗಿಯೇ ಕೊಂದು ಲಂಕಾ ನಗರವನ್ನು ಸುಟ್ಟುಹಾಕಿದನು. ಅವನು ಮಾಡಿದ ಸಾಹಸಗಳು ಮೂರು ಲೋಕಗಳಲ್ಲಿಯೂ ಯಾರಿಂದಲೂ ಸಾಧ್ಯವಾಗದೆನಿಸುತ್ತದೆ. ಅಷ್ಟೊಂದು ಬಲಶಾಲಿಯಾದ ಹನುಮಂತನು ವಾಲಿಯನ್ನು ಕೊಲ್ಲದೆ, ತನ್ನ ಪ್ರಭುವಾದ ಸುಗ್ರೀವನು ಅಷ್ಟೆಲ್ಲ ಕಷ್ಟಪಡುವಂತೆ ಏಕೆ ಸುಮ್ಮನಿದ್ದನೋ ಅರ್ಥವಾಗುವುದಿಲ್ಲ. ಈ ನನ್ನ ಸಂಶಯವನ್ನು ತೀರಿಸುವಿರಾ ?" ಎಂದು ಕೇಳಿಕೊಂಡನು.

ಅದನ್ನು ಕೇಳಿ ಅಗಸ್ತ್ಯನು, "ರಾಮಚಂದ್ರಾ, ಹನುಮಂತನನ್ನು ಕುರಿತು ನೀನು ಹೇಳಿದ್ದೆಲ್ಲಾ ನಿಜವೇ. ಅಂತಹ ಬಲಶಾಲಿಯೂ, ವೇಗವಂತನೂ, ಬುದ್ಧಿವಂತನೂ ಬೇರೆ ಯಾರೂ ಇರಲಾರರು. ಅವನು ಅತೀ ಸಣ್ಣ ಪ್ರಾಯದಲ್ಲಿಯೇ ಎಷ್ಟೋ ಅದ್ಭುತಗಳನ್ನು ಮಾಡಿದ್ದಾನೆ. ಬಹುಶಃ ಅವನಿಗೆ ಆ ವಿಷಯಗಳು ನೆನಪಿನಲ್ಲಿರಲಿಕ್ಕಿಲ್ಲ. ಮುನಿಗಳು ಅವನಿಗೆ ಬಾಲ್ಯದಲ್ಲೇ ಒಂದು ಶಾಪವನ್ನು ಕೊಟ್ಟು ಮರೆಯುವಂತೆ ಮಾಡಿದ್ದಾರೆ. ಆ ವಿಚಿತ್ರ ಕಥೆ



ಯನ್ನು ಹೇಳುತ್ತೇನೆ ಕೇಳು" ಎಂದು ಹನುಮಂತನ ಹುಟ್ಟು ಪೂರ್ವೋತ್ತರಗಳನ್ನು ವಿವರಿಸಿ ಹೇಳಿದನು :

ಹನುಮಂತನ ತಂದೆಯಾದ ಕೇಸರಿ ಮೇರು ಪರ್ವತದ ಮೇಲೆ ರಾಜ್ಯಪಾಲನೆ ಮಾಡುತ್ತಾ ಇರುವವನು. ಕೇಸರಿಯ ಪತ್ನಿಯಾದ ಅಂಜನಾ ದೇವಿ, ವಾಯುದೇವನ ಸಂಬಂಧದಿಂದ ಹನುಮಂತನಿಗೆ ಜನ್ಮವಿತ್ತಳು. ಹಸುಮಗುವಾದ ಹನುಮಂತನನ್ನು ಅವಳು ಒಂದು ಕಡೆಯಲ್ಲಿ ಮಲಗಿಸಿಟ್ಟು ಹಣ್ಣುಗಳನ್ನು ತರಲಿಕ್ಕಾಗಿ ಕಾಡಿನೊಳಗೆ ಹೋದಳು. ಅಷ್ಟರಲ್ಲಿ ಹನುಮಂತನಿಗೆ ಹಸಿವೆಯಾಗಿ ಅಳಲು ಪ್ರಾರಂಭ ಮಾಡಿದನು. ಆ ಸಮಯದಲ್ಲಿ ಮೂಡು ದಿಕ್ಕಿನ ಬೆಟ್ಟದ ಮೇಲೆ ಕೆಂಪಗೆ ಸೂರ್ಯಬಿಂಬವು ಉದಯವಾಯಿತು. ಅದೊಂದು ಹಣ್ಣು ಎಂದುಕೊಂಡು ಬಾಲ ಹನುಮನು ಅದನ್ನು ಹಿಡಿಯಲು ಆಕಾಶಕ್ಕೆ ಹಾರಿ ಹೋಗಲು ತೊಡಗಿದನು. ಸೂರ್ಯನ ಹತ್ತಿರ ಹೋಗುವುದರೊಳಗೆ ಮತ್ತೊಂದು ಸೂರ್ಯನ ಹಾಗೆ ಸೂರ್ಯ ಕಿರಣಗಳಿಂದ ಹೊಳೆಯುವ ಹನುಮಂತನನ್ನು ನೋಡಿ ದೇವತೆಗಳೂ, ದಾನವರೂ, ಯಕ್ಷರೂ ದಿಗ್ಭ್ರಮೆಗೊಂಡು ಕದಲಿದರು. ಆಗಲೇ ಹನುಮಂತನ ವೇಗವು ಗರುತ್ಮಂತನ ವೇಗವನ್ನೂ, ವಾಯುವೇಗವನ್ನೂ ಮೀರಿಸಿತ್ತು.

ಹಾಗೆ ಸೂರ್ಯನ ಕಡೆಗೆ ಹಾರುತ್ತಿರುವ ತನ್ನ ಮಗನ ಹಿಂದೆ ವಾಯುದೇವನು ಕೂಡಾ ಓಡುತ್ತಾ, ಆ ಶಿಶುವಿಗೆ ಸೂರ್ಯನ ಬೇಗೆ ತಗಲದಂತೆ ಮಂಜಿನ ಬಿಂದುಗಳನ್ನು ಚಿಮುಕಿಸುತ್ತಾ ಸಾಗಿದನು. ಹೀಗೆ ತನ್ನನ್ನು ಸಮೀಪಿಸುವ ಹಸುಕಂದನ ಮೇಲೆ ಸೂರ್ಯನು ಕೂಡಾ ಬಹು ಕಷ್ಟದಿಂದ ತನ್ನ ಅಪಾರ ಪ್ರತಾಪವನ್ನು ಹಿಂದೊತ್ತಿ ಕಡಿಮೆ ಮಾಡಿಕೊಂಡಿದ್ದನು.

ಅದಲ್ಲದೆ ಹನುಮಂತನು ಸೂರ್ಯನನ್ನು ತಲಪುವ ಸಮಯಕ್ಕೇ, ಸೂರ್ಯನನ್ನು ಹಿಡಿಯಲು ರಾಹು ಕೂಡಾ ಸೂರ್ಯನ ರಥದ ಕಡೆಗೆ ಬಂದನು. ರಾಹುವನ್ನು ನೋಡಿದ ಕೂಡಲೇ ಹನುಮಂತನು ಇದೇನೋ ಹೊಸತೆಂಬ ಕೌತುಕದಲ್ಲಿ ಸೂರ್ಯನನ್ನು ಬಿಟ್ಟು ರಾಹುವನ್ನು ಹಿಡಿದುಕೊಳ್ಳಲು ತಿರುಗಿದನು.

ರಾಹು ಹೆದರಿ ಓಡಿಹೋಗಿ ತುಂಬಿದ ಸಭೆಯಲ್ಲಿರುವ ಇಂದ್ರನನ್ನು ನೋಡಿ, "ಇಂದ್ರಾ ! ಇದೇನು ಅನ್ಯಾಯ ! ನನ್ನ ಹಕ್ಕಿನ ಪರ್ವಕಾಲವೆಂದು ನಾನು ಸೂರ್ಯನನ್ನು ನುಂಗಲು ಹೋಗುವ ಸಮಯದಲ್ಲಿ ಅಲ್ಲಿಗೆ ಮತ್ತೊಬ್ಬ ರಾಹುವನ್ನು ಏಕೆ ಕಳುಹಿಸಿದೆ ? ಅವನು ಸೂರ್ಯನನ್ನೂ ನನ್ನನ್ನೂ ಸೇರಿಸಿಯೇ ನುಂಗಲು ನೋಡುತ್ತಿದ್ದಾನೆ ! ಇದೇನು ವಿಪರೀತ !" ಎಂದನು.

ಕೂಡಲೇ ಇಂದ್ರನು ಆಶ್ಚರ್ಯಪಡುತ್ತ, ಐರಾವತದ ಮೇಲೆ ಹಾರಿ ಕುಳಿತು ರಾಹುವಿ

ನೊಂದಿಗೆ ಸೂರ್ಯನ ಹತ್ತಿರ ಬಂದನು. ಇನ್ನೂ ಅಲ್ಲಿಯೇ ತಿರುಗುತ್ತಿದ್ದ ಬಾಲ ಹನುಮಂತನು ರಾಹುವನ್ನು ನೋಡಿದ ಕೂಡಲೇ ಕೈಚಾಚಿ ಹಿಡಿಯಲು ಬಂದನು.

"ಕಾಪಾಡು ಇಂದ್ರಾ! ಕಾಪಾಡು!" ಎಂದು ಕೂಗಿದನು ರಾಹು.

"ಹೆದರಬೇಡ! ಇಗೋ ಇವನನ್ನು ಕೊಲ್ಲುವೆನು!" ಎಂದು ಇಂದ್ರನು ರಾಹುವಿನೊಡನೆ ಹೇಳುತ್ತಿರುವಷ್ಟರಲ್ಲೇ, ಹನುಮಂತನು 'ಬಿಳೀ ಬಣ್ಣದ ಐರಾವತವನ್ನು ನೋಡಿ, ಅದೇನೋ ಬೆಳ್ಳಗಿನ ಹಣ್ಣೆಂದುಕೊಂಡು ಅದರ ಕಡೆಗೆ ತಿರುಗಿ ಧಾವಿಸಿದನು.

ಇದನ್ನು ಗಮನಿಸಿದ ಇಂದ್ರನು ತನ್ನ ಕೈಯಲ್ಲಿದ್ದ ವಜ್ರಾಯುಧದಿಂದ ಹೊಡೆಯುವಾಗಲೇ ಇದು ಯಾವುದೋ ಎಳೆಯ ಮಗುವಿನಂತಿರುವುದನ್ನು ನೋಡಿ, ಮೆಲ್ಲಗೆ ಹೊಡೆದು ತಟ್ಟಿ, "ದೂರ ಹೋಗು" ಎಂದನು.

ಆ ಪೆಟ್ಟಿಗೆ ಬಾಲ ಹನುಮಂತನು ಒಂದು ಬೆಟ್ಟದ ಶಿಖರದ ಮೇಲೆ ಬಿದ್ದನು. ಅದರಿಂದ ಅವನ ಎಡದ ದವಡೆ ಜಜ್ಜಿ ಹೋಯಿತು.

ತನ್ನ ಮಗನನ್ನು ಹೀಗೆ ಹೊಡೆದು ಬೀಳಿಸಿದುದನ್ನು ನೋಡಿ ವಾಯುದೇವನಿಗೆ ಕೋಪ ಬಂದುದರಿಂದ, ಅವನು ಪ್ರಪಂಚ ಸಂಚಾರವನ್ನು ಬಿಟ್ಟು, ತನ್ನ ಮಗನನ್ನು ಎತ್ತಿಕೊಂಡು ಒಂದು ಪರ್ವತದ ಗುಹೆಯೊಳಗೆ ಕುಳಿತುಬಿಟ್ಟನು. ಪ್ರಾಣಿಕೋಟಿಗಳಿಗೆ ಶ್ವಾಸೋಚ್ಛ್ವಾಸಗಳಿಗೆ ಸಾಧ್ಯವಿಲ್ಲದೆ ತುಳ್ಳಾಡ ತೊಡಗಿದುವು. ದೇವ, ಗಂಧರ್ವ, ಮುನಿಗಳೆಲ್ಲಾ ಬ್ರಹ್ಮನ ಬಳಿಗೆ ಓಡಿಹೋಗಿ ಪ್ರಪಂಚಕ್ಕೆ ಬಂದ ಕಷ್ಟವನ್ನು ಕುರಿತು ಮೊರೆಯಿಟ್ಟುಕೊಂಡರು. ಬ್ರಹ್ಮನು ಅವರನ್ನೆಲ್ಲಾ ಕರೆದುಕೊಂಡು ವಾಯುದೇವನಿರುವ ಗುಹೆಯ ಮುಂದೆ ಬಂದನು.

ಬ್ರಹ್ಮನೇ ಮೊದಲಾದವರನ್ನು ನೋಡಿದ ಕೂಡಲೇ ವಾಯುದೇವನು ತನ್ನ ಮಗನನ್ನು ಎತ್ತಿಕೊಂಡು ಹೊರಗೆ ಬಂದು, ಬ್ರಹ್ಮನ






ಕಾಲಿಗೆ ಅಡ್ಡಬಿದ್ದನು. ಬ್ರಹ್ಮನು ಹನುಮಂತನನ್ನು ತಡವಿದ ಕೂಡಲೇ ಸ್ತಬ್ಧನಾಗಿ ಹೋಗಿದ್ದ ಬಾಲ ಹನುಮಂತನು ಮತ್ತೆ ಮೊದಲಿನಂತಾದನು. ಬ್ರಹ್ಮನ ಆಗಮನದಿಂದ ವಾಯುದೇವನು ಶಾಂತನಾಗಿ ಪ್ರಪಂಚದೊಳಗೆಲ್ಲಾ ತನ್ನ ಕರ್ತವ್ಯಕರ್ಮದಂತೆ ಪಸರಿಸಿ ಎಲ್ಲಾ ಪ್ರಾಣಿಗಳಿಗೂ ಜೀವಬರಿಸಿದನು.

ವಾಯುದೇವನನ್ನು ಇನ್ನಿಷ್ಟು ಸಂತೋಷಪಡಿಸುವ ಉದ್ದೇಶದಲ್ಲಿ ಬ್ರಹ್ಮನು ದಿಕ್ಪಾಲಕರನ್ನು ನೋಡಿ ಹನುಮಂತನಿಗೆ ವರಗಳನ್ನು ಕೊಡಲು ಹೇಳಿದನು. ತನ್ನ ಮೂಲಕ ಅವನಿಗೆ ಹನು (ದವಡೆ) ಜಜ್ಜಿದುದರಿಂದ ಇಂದ್ರನು ಅವನಿಗೆ ಹನುಮಂತನೆಂದು ಹೆಸರಿಟ್ಟು ವಜ್ರಾಯುಧದ ಪೆಟ್ಟು ಅವನನ್ನು ಏನೂ ಮಾಡದಂತೆ ವರವಿತ್ತನು. ಸೂರ್ಯನು ತನ್ನ ತೇಜಸ್ಸಿನ ಒಂದು ಭಾಗದಷ್ಟನ್ನು ಹನುಮಂತನಿಗೆ ಕೊಟ್ಟು ಒಳ್ಳೆಯ ವಕ್ತಾರನಾಗುವಂತೆಯೂ, ಪಂಡಿತನಾಗುವಂತೆಯೂ ವರಗಳನ್ನು ಕೊಟ್ಟನು.

ಹನುಮಂತನಿಗೆ ಜಲಗಂಡವಿಲ್ಲದಂತೆ ವರುಣನೂ, ಕಾಲದಂಡದಿಂದ ಸಾವು ಬಾರದಂತೆ ಯಮನೂ, ತನ್ನ ಗದೆಯಂತಹ ಗದೆಗಳಿಂದ ಅಪಾಯವಾಗದಂತೆ ಕುಬೇರನೂ ವರಗಳನ್ನು ಕೊಟ್ಟರು. ತನ್ನಿಂದಾಗಲಿ, ತನ್ನ ಅಸ್ತ್ರಗಳಿಂದಾಗಲಿ ಹನುಮಂತನಿಗೆ ಅಪಾಯವಾಗದಂತೆ ಶಿವನೂ ವರ ಕೊಟ್ಟನು. ಬ್ರಹ್ಮನೂ, ವಿಶ್ವಕರ್ಮನೂ ಅಂತಹ ವರವನ್ನೇ ಹನುಮಂತನಿಗೆ ಕೊಟ್ಟರು.

ಈ ಬಗೆಯ ವರಗಳಿಂದಾಗಿ ಹನುಮಂತನು ಶತ್ರುಗಳಿಗೆ ಭಯಂಕರನಾದನು. ಯುದ್ಧದಲ್ಲಿ ಸೋಲಿಲ್ಲದವನಾದನು. ಕಾಮರೂಪ, ಕಾಮಗಮನಗಳ ಶಕ್ತಿಯೂ ಅವನಿಗೆ ಬಂದುವು. ಇದರಿಂದ ವಾಯುದೇವನಿಗಾದ ಸಂತೋಷಕ್ಕೆ ಮೇರೆಯಿಲ್ಲದಂತಾಯಿತು.

ಹೀಗಾದನಂತರ ಹನುಮಂತನು ಅಪಾರ ಬಲಸಂಪನ್ನನಾಗಿ ನಿರ್ಭೀತಿಯಿಂದ ಸಂಚರಿಸುತ್ತ, ತನ್ನ ಬಾಲಚೇಷ್ಟೆಗಳಿಂದ ಆಶ್ರಮಗಳಲ್ಲಿರುವ ಮುನಿಗಳಿಗೆ ಬಹಳ ಉಪದ್ರಗಳನ್ನೂ, ಯಾತನೆಗಳನ್ನೂ ಕೊಡಲು ತೊಡಗಿದನು. ಅವನು ದೇವತೆಗಳಿಂದ ದೊಡ್ಡ ದೊಡ್ಡ ವರಗಳನ್ನು ಪಡೆದವನೆಂದು ಅವರಿಗೆಲ್ಲ ಗೊತ್ತಿತ್ತು. ಈ ಹನುಮ ಹುಡುಗನಿಂದ ಮುನಿಗಳ ನಾರಬಟ್ಟೆಗಳೂ, ಅಗ್ನಿಹೋತ್ರಗಳೂ, ಪಾತ್ರಪರಡಿಗಳೂ, ಕೃಷ್ಣಾಜಿನಗಳೂ ಧ್ವಂಸವಾಗುತ್ತಿದ್ದುವು. ಆದರೂ ಮುನಿಗಳು ನೋಡಿಯೂ ನೋಡದವರಂತೆ ಮೌನವಾಗಿದ್ದರು.

ಹನುಮಂತನ ತಂಟೆಗಳನ್ನು ನೋಡಿ ಒಂದುಕಡೆ ಕೇಸರಿಯೂ, ಅಂಜನಾದೇವಿಯೂ, ಮತ್ತೊಂದು ಕಡೆಯಿಂದ ವಾಯುದೇವನೂ ಹಾಗೆಲ್ಲಾ ಮಾಡಬಾರದೆಂದು ಎಷ್ಟು ಬುದ್ಧಿ ಹೇಳಿದರೂ ಹನುಮಂತನು ಪರರನ್ನು ನೋಯಿಸುವ ಆ ಚೇಷ್ಟೆಗಳನ್ನು ಬಿಡಲಿಲ್ಲ. ಕಡೆಗೆ ಮಹರ್ಷಿಗಳು ಸಹನೆ

ಗೆಟ್ಟು, "ಎಲೋ ಪೋರನೇ ! ನಿನ್ನ ಬಲದ ಅರಿವು ನಿನಗಿದ್ದುದರಿಂದ ತಾನೇ ನೀನು ಇಷ್ಟೆಲ್ಲಾ ದುಷ್ಟತನಗಳನ್ನು ಮಾಡುವುದು ? ಇನ್ನೊಬ್ಬರು ನೆನಪು ಮಾಡುವವರೆಗೂ ನಿನ್ನ ಬಲವು ಎಂತಹುದೆಂದು ನಿನಗೆ ತಿಳಿಯದೆಯೇ ಹೋಗಲಿ" ಎಂದು ಅವನಿಗೆ ಶಾಪ ಕೊಟ್ಟರು.

ಆಗಿನಿಂದ ಹನುಮಂತನು ತನ್ನ ಬಲ ಪರಾಕ್ರಮಗಳನ್ನೆಲ್ಲಾ ಮರೆತುಬಿಟ್ಟನು. ತಾನು ಎಲ್ಲರಂತೆ ಸಾಮಾನ್ಯನೆಂದೇ ತಿಳಿದುಕೊಂಡು ಮುನಿಗಳ ಮೇಲೆ ಭಯಭಕ್ತಿ ತೋರಿಸುತ್ತ ಒಳ್ಳೆಯ ಬುದ್ಧಿವಂತನಾಗಿ ಆಶ್ರಮವಾಸಿಗಳಿಗೆ ಸೇವೆಯನ್ನು ಮಾಡಲಿಕ್ಕೂ ತೊಡಗಿದನು.

ಆ ಕಾಲದಲ್ಲಿ ವಾಲಿ ಸುಗ್ರೀವರ ತಂದೆಯಾದ ಋಕ್ಷರಜಸನು ವಾನರರಿಗೆಲ್ಲಾ ರಾಜನಾಗಿದ್ದನು. ಅವನು ಕಾಲಗತಿ ಹೊಂದಿದ ಮೇಲೆ ವಾನರರು ಹಿರಿಯವನಾದ ವಾಲಿಗೆ ಪಟ್ಟಾಭಿಷೇಕ ಮಾಡಿದರು. ಅವನ ತಮ್ಮನಾದ ಸುಗ್ರೀವನಿಗೆ ಯುವರಾಜ ಪಟ್ಟಾಭಿಷೇಕವೂ ಆಯಿತು.

ಹನುಮಂತ ಸುಗ್ರೀವರೊಳಗೆ ಚಿಕ್ಕಂದಿನಿಂದಲೇ ಎಡೆಬಿಡದ ಸ್ನೇಹವಿದ್ದಿತು. ಹಾಗಿರುವಾಗ ವಾಲಿಗೆ ಸುಗ್ರೀವನೊಂದಿಗೆ ವೈರವು ಏರ್ಪಡುವಂತಾದ ಮೇಲೆ, ಸುಗ್ರೀವನು ವಾಲಿಗೆ ಸಿಕ್ಕದಂತೆ ತಪ್ಪಿಸಿಕೊಂಡು ಹೋಗಿ ನಾನಾ ಕಷ್ಟಗಳಿಗೆ ಗುರಿಯಾದನು. ಆಗ ಹನುಮಂತನಿಗೆ ತನ್ನ ಬಲವೆಂತಹುದೆಂದು ತಿಳಿಯದಿದ್ದ ಕಾರಣದಿಂದ, ಸುಗ್ರೀವನಿಗೆ ಹನುಮಂತನಿಂದ ಯಾವ ಬಗೆಯ ಸಹಾಯವೂ ಲಭಿಸದೆ ಹೋಯಿತು.

ಹೀಗೆ ಹನುಮಂತನ ವೀರ ಕಥಾನಕವನ್ನು ಅಗಸ್ತ್ಯನು ರಾಮನಿಗೆ ಹೇಳಿ, "ರಾಮಚಂದ್ರಾ, ಹನುಮಂತನು ಎಂತಹ ಶಕ್ತಿಶಾಲಿಯೆಂದು ಭಾವಿಸುವೆಯೋ ಅದಕ್ಕಿಂತಲೂ ಹೆಚ್ಚಿನವನಾಗಿದ್ದಾನೆ. ಅವನು ವ್ಯಾಕರಣವನ್ನು ಚೆನ್ನಾಗಿ ಕಲಿಯಲಿಕ್ಕಾಗಿ ಸೂರ್ಯನೊಂದಿಗೇ ಉದಯ ಗಿರಿಯಿಂದ ಅಸ್ತಗಿರಿಯವರೆಗೂ ತಿರುಗಿದವನು. ಯಾವ ವಿದ್ಯೆಗಳಲ್ಲಿಯೂ ಅವನಿಗೆ ಸಮಾನರೆಂದು ಯಾರೂ ಇಲ್ಲ. ಅವನು ಮುಂದೆ ಬರಲಿರುವ ಬ್ರಹ್ಮನಾಗಿಯೂ ಇರುತ್ತಾನೆ" ಎಂದನು.

ಹನುಮಂತನ ಕಥೆಯಿಂದ ತೃಪ್ತನಾದ ರಾಮನು ಅಗಸ್ತ್ಯ ಮಹಾ ಮುನಿಯೊಂದಿಗೆ, "ಸ್ವಾಮಿ, ವಾಲಿ ಸುಗ್ರೀವರ ತಂದೆಯಾದ ಋಕ್ಷರಜಸನು ಯಾರು ? ಅವನ ಮಹತ್ವಗಳೇನು ? ಅವನ ತಾಯಿ ಯಾರು ? ಆ ಸಮಾಚಾರಗಳನ್ನು ಕೂಡಾ ಹೇಳಿದರೆ ಸಂತೋಷಿಸುತ್ತೇನೆ." ಎಂದು ಕೇಳಿಕೊಂಡನು.





# ಉತ್ತರ ರಾಮಾಯಣ

ಅಗಸ್ತ್ಯ ಮಹಾಮುನಿ ರಾಮನಿಗೆ ವಾಲಿ ಸುಗ್ರೀವರ ವೃತ್ತಾಂತವನ್ನು ವಿವರಿಸಿ ಹೇಳಿದನು.

ಮೇರು ಪರ್ವತದ ಮೇಲಿನ ಮಧ್ಯದ ಶಿಖರವು ದೇವತೆಗಳಿಗೆ ಕೂಡಾ ವಿಚಿತ್ರ ಪ್ರದೇಶವಾಗಿದ್ದಿತು. ಸೊಗಸಾದ ವಿಶಾಲವಾದ ಮೈದಾನದಂತೆ ಅದು ಆಕರ್ಷಣೀಯವಾಗಿತ್ತು. ಅಲ್ಲಿಯೇ ಸೃಷ್ಟಿಕರ್ತನಾದ ಬ್ರಹ್ಮನ ಆಲೋಚನೆಯ ಸಭೆಯೂ ಸೇರುತ್ತಿದ್ದಿತು.

ಒಂದು ದಿನ ಬ್ರಹ್ಮನು ಅಲ್ಲಿ ಯೋಗಧ್ಯಾನದಲ್ಲಿರುವಾಗ ಅವನ ಕಣ್ಣಿನಿಂದ ಒಂದು ತೊಟ್ಟು ನೀರು ಜಾರಿ ಕೆಳಗೆ ಬಿತ್ತು. ಆ ಕಣ್ಣೀರಿನ ಬೊಟ್ಟಿನಿಂದ ಒಬ್ಬ ವಾನರನು ಹುಟ್ಟಿದನು.

ಬ್ರಹ್ಮನು ಅವನನ್ನು ನೋಡಿ, ಯಕ್ಷರಜಸನೆಂದು ಕರೆದು, ಸ್ವಲ್ಪ ಕಾಲ ತನ್ನ ಹತ್ತಿರವೇ ಇರುವಂತೆ ಹೇಳಿದನು, ಅದರಂತೆ ಆ ವಾನರನು ಮೇರು ಪರ್ವತದ ಮೇಲಿನ, ಗೆಡ್ಡೆ ಗೆಣಸುಗಳನ್ನು ತಿನ್ನುತ್ತಲಿದ್ದನು. ಹೆಚ್ಚಾಗಿ ಆ ವಾನರನು ಹಗಲೆಲ್ಲಾ ಮರಗಳ ಮೇಲೆ ಸಂಚರಿಸುತ್ತ, ಹೊಟ್ಟೆ ತುಂಬಿಸಿಕೊಂಡು, ಸಾಯಂಕಾಲವಾದ ಮೇಲೆ ಒಳ್ಳೊಳ್ಳೆಯ ಹೂಗಳನ್ನೂ, ಹಣ್ಣುಗಳನ್ನೂ ತೆಗೆದುಕೊಂಡು ಬ್ರಹ್ಮನ ಬಳಿಗೆ ಬರುವನು.

ಹೀಗೆ ಬಹಳ ಕಾಲ ಕಳೆಯಿತು. ಒಂದು ದಿನ ಆ ವಾನರನಿಗೆ ಬಹಳ ದಾಹವಾಯಿತು. ಅವನು ಮೇರು ಪರ್ವತದ ಉತ್ತರ ದಿಕ್ಕಿನ ಒಂದು ಶಿಖರಕ್ಕೆ ಹೋದನು. ಅಲ್ಲಿ ಅನೇಕ ಪಕ್ಷಿಗಳಿಂದ ಕೂಡಿದ ಒಂದು ಸರೋವರವು ಕಾಣಿಸಿತು. ವಾನರನು ತನ್ನ ಶರೀರವನ್ನೆಲ್ಲಾ ಒಂದುಸಾರಿ ಮೈಮುರಿದುಕೊಂಡು ನೀರಿನ ಬದಿಯಲ್ಲಿ ಕುಳಿತು ತನ್ನ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಬಾಗಿ ನೀರನ್ನು ನೋಡಿದನು. ಅದರಲ್ಲಿ ಅವನ ಪ್ರತಿಬಿಂಬವು ಕಂಡಿತು. ಅದನ್ನು ನೋಡಿ ತುಂಬ ಬೆರಗಾದನು.

ಆ ಸರೋವರದ ನೀರಿನಲ್ಲಿ ತನ್ನ ಶತ್ರುವಾದ ಮತ್ತೊಬ್ಬ ವಾನರನು ಅಡಗಿರುವನೆಂದುಕೊಂಡು ವಾನರನು ಚಂಗನೆ ನೀರಿನೊಳಗೆ ಹಾರಿ ಸರೋವರವನ್ನೆಲ್ಲಾ ಹುಡುಕಾಡಿದನು. ಸರೋವರದಲ್ಲಿದ್ದ



ಇನ್ನೊಬ್ಬ ವಾನರನು ಕಾಣದೆ ಹೋಗಲು, “ನನ್ನನ್ನು ನೋಡಿ ಹೆದರಿ ಎಲ್ಲಿ ಅಡಗಿದನೋ!” ಎಂದುಕೊಂಡು ಬೇಸತ್ತು ಮತ್ತೆ ತೀರಕ್ಕೆ ಬಂದನು.

ಅವನು ಸರೋವರದಲ್ಲಿ ತೊಳಸಾಡಿ ತೀರಕ್ಕೆ ಬಂದು ಕುಳಿತಾಗ ಸುಂದರಿಯಾದ ಹೆಣ್ಣು ರೂಪಕ್ಕೆ ಬದಲಾಯಿಸಿ ಬಿಟ್ಟಿದ್ದನು. ಈಗ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ.

ಜಗನ್ಮೋಹನಾಕಾರದ ಆ ಸುಂದರ ವಾನರಿ ಅಲ್ಲಿಯೇ ಕುಳಿತಿರಲು, ಇಂದ್ರನೂ, ಸೂರ್ಯನೂ ಬ್ರಹ್ಮನ ದರ್ಶನಕ್ಕಾಗಿ ಅಲ್ಲಿಗೆ ಬಂದರು. ಅವರಿಬ್ಬರ ಕಣ್ಣುಗಳೂ ಒಂದೇಸಾರಿ ಆ ವಾನರ ಸುಂದರಿಯ ಮೇಲೆ ಬಿದ್ದುವು. ಇಬ್ಬರಿಗೂ ಅವಳ ಮೇಲೆ ಪ್ರೇಮ ಒಸರಿತು. ಅನಂತರ ಅವರಿಬ್ಬರಿಂದಲೂ ಅವಳು ಗರ್ಭವತಿಯಾದಳು. ಹೀಗೆ ಅವಳ ಗರ್ಭದಿಂದ ಮೊದಲು ವಾಲಿಯೂ, ಆಮೇಲೆ ಸುಗ್ರೀವನೂ ಹುಟ್ಟಿದರು.

ಇಂದ್ರನು ತನ್ನ ಮಗನಾದ ವಾಲಿಗೆ ಬಂಗಾರದ ತಾಮರೆಯ ಮಾಲೆಯನ್ನು ಕಾಣಿಕೆಯಾಗಿ ಹಾಕಿದನು. ಸೂರ್ಯನು ತನ್ನ ಮಗನಾದ ಸುಗ್ರೀವನಿಗೆ ಹನುಮಂತನನ್ನು ಬಿಡದ ಸ್ನೇಹಿತನಾಗಿರುವಂತೆ ನಿರೂಪಿಸಿದನು.

ಅಷ್ಟಾದ ಮೇಲೆ ಆ ವಾನರಿಯು ಸ್ತ್ರೀ ರೂಪವು ಹೋಗಿ ಮೊದಲಿನಂತೆ ಪುರುಷ ರೂಪವೇ ಬಂತು. ಅವನೇ ತನ್ನ ಇಬ್ಬರು ಮಕ್ಕಳನ್ನೂ ಪೋಷಿಸಿ ಬೆಳೆಸಿದನು.

ಬ್ರಹ್ಮನು ಒಂದು ದಿನ ತನ್ನ ಕಂಬನಿಯಿಂದ ಹುಟ್ಟಿದ ಆ ವಾನರನನ್ನು ಕರೆದು, “ಇನ್ನು ನೀನು ನಿನ್ನ ಇಬ್ಬರು ಕುಮಾರರನ್ನು ಕರೆದುಕೊಂಡು ವಾನರರ ನಗರವಾದ ಕಿಷ್ಕಿಂಧೆಗೆ ಹೋಗು. ಅದೇ ಇನ್ನು ಮೇಲೆ ನಿಮ್ಮ ರಾಜ್ಯ” ಎಂದು ಆಜ್ಞಾಪಿಸಿದನು. ಬ್ರಹ್ಮಾಜ್ಞೆಯನ್ನು ತಲೆಯೊಳಾಂತು ಋಕ್ಷರಜಸನು ಮಕ್ಕಳೊಂದಿಗೆ ಕಿಷ್ಕಿಂಧೆಗೆ ಹೋಗಿ, ರಾಜ್ಯಾಬಿಷೇಕ ಮಾಡಿಸಿಕೊಂಡನು. ಸಪ್ತ ದ್ವೀಪಗಳಲ್ಲಿರುವ ವಾನರರೆಲ್ಲರಿಗೂ ಋಕ್ಷರಜಸನು ರಾಜನಾದನು.

“ರಾಮಾ, ಈ ರೀತಿಯಾಗಿ ವಾಲಿ ಸುಗ್ರೀವರಿಗೆ ತಂದೆಯೂ ತಾಯಿಯೂ ಋಕ್ಷರಜಸನೇ” ಎಂದು ಅಗಸ್ತ್ಯನು ಆ ಕಥೆಯನ್ನು ಮುಗಿಸಿದನು.

ರಾಮ ಪಟ್ಟಾಭಿಷೇಕವು ನಡೆದ ಮೇಲೆ ಅನೇಕ ದಿನಗಳವರೆಗೆ ಅಲ್ಲಿಗೆ ಬಂದವರೆಲ್ಲರಿಗೂ ಸುಖವಾಗಿಯೇ ಕಾಲ ಕಳೆಯಿತು. ಆಮೇಲೆ ಬಂದವರು ಒಬ್ಬೊಬ್ಬರಾಗಿ ಹೊರಟು ಹೋಗಲು ಪ್ರಾರಂಭಿಸಿದರು. ರಾಮನು ಎಲ್ಲರಿಗೂ ತನ್ನ ಕೃತಜ್ಞತೆ ಹೇಳಿಕೊಂಡು ತಕ್ಕ ವಿಧವಾಗಿ ಸತ್ಕಾರಮಾಡಿ ಕಳುಹಿಸಿಕೊಡುತ್ತಿದ್ದನು. ಬಂದಿದ್ದ ಅತಿಥಿ ಅಭ್ಯಾಗತರ ಗುಂಪು ಕರಗುತ್ತಾ ಬಂದಿತು.

ಜನಕ ಮಹಾರಾಜನು ಹೋಗುವಾಗ ಭರತನು ಅವನೊಂದಿಗೆ ದೂರದವರೆಗೆ ಹೋದನು. ಕೇಕಯ

ಮಹಾರಾಜನ ಹಿಂದೆ ಲಕ್ಷ್ಮಣನು ಹೋಗಿ ಕಳುಹಿಸಿ ಕೊಟ್ಟನು. ಭರತನ ಆಹ್ವಾನದ ಮೇಲೆ ರಾಮ ಪಟ್ಟಾಭಿಷೇಕಕ್ಕೆ ಬಂದಿದ್ದ ಕಾಶೀರಾಜ ಪ್ರತ್ಯರ್ಧನನೂ, ಇತರ ರಾಜರೂ ತಮ್ಮ ತಮ್ಮ ದೇಶಗಳಿಗೆ ಹಿಂದಿರುಗಿ ಹೋದರು.

ರಾಮನ ಹಿಂದೆ ಬಂದ ವಾನರರೂ, ವಿಭೀಷಣಾದಿ ರಾಕ್ಷಸರೂ ಎರಡು ತಿಂಗಳ ಕಾಲವನ್ನು ಅಯೋಧ್ಯೆಯಲ್ಲಿ ಸುಖವಾಗಿ ಕಳೆದು ಹೊರಡಲು ಸಿದ್ಧರಾಗತೊಡಗಿದರು.

ತನಗೆ ಯುದ್ಧದಲ್ಲಿ ಸಹಾಯಕರಾಗಿದ್ದ ಪರಮ ಮಿತ್ರರಾದ ಸುಗ್ರೀವ, ಅಂಗದ, ಹನುಮಂತ ಮೊದಲಾದವರನ್ನು ರಾಮನು ಬಹು ಚೆನ್ನಾಗಿ ಸತ್ಕರಿಸಿದನು. ಹಾಗೆಯೇ ವಿಭೀಷಣನಿಗೂ, ಅವನ ರಾಕ್ಷಸರಿಗೂ ದೊಡ್ಡ ದೊಡ್ಡ ಸನ್ಮಾನಗಳನ್ನು ಕೊಟ್ಟನು. ಅವರೆಲ್ಲರೂ ಹೊರಟು ಕಿಷ್ಕಿಂಧೆಗೂ ಲಂಕೆಗೂ ಹಿಂದಿರುಗಿದರು.

ಆಮೇಲೆ ರಾಮನು ಸೀತೆಯೊಂದಿಗೆ ವನವಿಹಾರ ಮಾಡುತ್ತ, ಮಿತ್ರರೊಂದಿಗೆ ಇಷ್ಟಾಗೋಷ್ಠಿ ಜರುಗಿಸುತ್ತ, ಕಾಲಕಾಲದಲ್ಲಿ ರಾಜ್ಯಪಾಲನೆಯನ್ನು ಗಮನಿಸುತ್ತ ಕಾಲ ಕಳೆಯುತ್ತಿದ್ದನು. ಹಾಗಿರುವಾಗ ಸೀತೆಯಲ್ಲಿ ಗರ್ಭಚಿಹ್ನೆಗಳು ಕಾಣತೊಡಗಿದವು. ರಾಮನಿಗೆ ಬಹಳ ಸಂತೋಷವಾಯಿತು.

ಒಂದು ದಿನ ರಾಮನು ಸೀತೆಯೊಂದಿಗೆ, "ಸೀತೇ, ಈಗ ನೀನು ಗರ್ಭಿಣಿಯಾಗಿರುವವಳು ತಾನೆ? ನಿನಗೆ ಏನಾದರೂ ಆಶೆ ಅಪೇಕ್ಷೆಗಳಿದ್ದರೆ ಹೇಳಿಬಿಡು. ಈ ಸಮಯದಲ್ಲಿ ಯಾವುದನ್ನೂ ಮುಚ್ಚಿಟ್ಟುಕೊಳ್ಳಲಾಗದು. ಅದನ್ನು ತೀರಿಸಬೇಕಾದುದು ನಮ್ಮ ಕರ್ತವ್ಯವಾಗಿದೆ" ಎಂದನು.

ಸೀತೆ ಮುಗುಳುನಗುತ್ತ, ಮುಖ ತಗ್ಗಿಸಿಕೊಂಡು, "ನನಗೆ ತಮಸಾ ನದಿಯಾಚೆ ಗಂಗಾತೀರದಲ್ಲಿರುವ ಋಷಿಗಳ ಆಶ್ರಮಗಳನ್ನು ನೋಡಿ, ಅವರು



ಕೊಡುವ ಕಂದಮೂಲ ಫಲಗಳನ್ನು ತಿಂದು ಅಲ್ಲಿರುವ ಮರಗಳ ಬುಡದಲ್ಲಿ ವಿಹರಿಸಬೇಕೆಂದು ಆಸೆಯಾಗಿದೆ" ಎಂದಳು.

"ಅದಕ್ಕೇನು ಕಷ್ಟ? ಈ ಕಾರ್ಯ ನನಗೂ ಸಂತೋಷಪ್ರದವೇ. ಹಾಗೆಯೇ ಮಾಡುವಿಯಂತೆ. ನಿನ್ನ ಇಷ್ಟದಂತೆ ನಾಳೆಯೇ ನಿನ್ನನ್ನು ಅಲ್ಲಿಗೆ ಕಳುಹಿಸುತ್ತೇನೆ" ಎಂದನು ರಾಮ.

ಹಾಗೆ ಸೀತೆಗೆ ಹೇಳಿದ ಮೇಲೆ ರಾಮನು, ತನ್ನ ಮಿತ್ರರ ಮಧ್ಯಕ್ಕೆ ಹೋಗಿ ವಿನೋದ ಕಥೆಗಳನ್ನು ಹೇಳುತ್ತ ಕುಳಿತು, ಭದ್ರನೆಂಬವನನ್ನು ನೋಡಿ, "ಹಾಗಾದರೆ ಭದ್ರಾ, ನೀನು ದೇಶದ ಎಲ್ಲಾ ಕಡೆಗಳಲ್ಲಿಯೂ ತಿರುಗಿ ವಾರ್ತಾ ಸಂಗ್ರಹ ಮಾಡುವ ಮುಖಂಡನು. ನನ್ನನ್ನೂ, ಸೀತೆಯನ್ನೂ ಕುರಿತು, ನನ್ನ ತಾಯಿಯರನ್ನು ಕುರಿತು, ನನ್ನ ತಮ್ಮಂದಿರನ್ನು ಕುರಿತು ನಮ್ಮ ಪ್ರಜೆಗಳು ಏನು ಮಾತಾಡಿಕೊಳ್ಳುತ್ತಿದ್ದಾರೆ? ನಿನಗೆ ಗೊತ್ತಿರಬೇಕಲ್ಲ?" ಎಂದನು.



"ಸೀತೆ ನಿರ್ದೋಷಿ ಎಂದೂ, ಪರಮ ಪವಿತ್ರಳೆಂದೂ ಅಗ್ನಿಯೂ, ಇತರ ದೇವತೆಗಳೂ ಹೇಳಿದ್ದಾರೆ. ನನ್ನ ಅಂತರಾತ್ಮದಲ್ಲಿ ಕೂಡಾ ಹಾಗೆಯೇ ಅನಿಸಿದೆ. ಲಕ್ಷ್ಮಣಾ, ಇದೆಲ್ಲವೂ ನಿನ್ನ ಇದಿರಿನಲ್ಲಿಯೇ ನಡೆದ ಸಂಗತಿಯಷ್ಟೆ? ಆದುದರಿಂದಲೇ ಸೀತೆಯನ್ನು ಅಯೋಧ್ಯೆಗೆ ಕರೆದುಕೊಂಡು ಬಂದೆನು. ಆದರೆ ಈ ಅಪವಾದವನ್ನು ಹೇಗೆ ತಾಳಿಕೊಳ್ಳಲಿ? ತಾಳಲಾಗದಂತಹ ಬಾಧೆಯಿದು. ನಿಮ್ಮನ್ನೂ, ನನ್ನ ಪ್ರಾಣವನ್ನೂ ಬಿಟ್ಟುಬಿಡುವೆನೇ ಹೊರತು ಅಪಕೀರ್ತಿಯನ್ನು ಸಹಿಸಲಾರೆನು. ಸೀತೆಯನ್ನು ಬಿಡುವುದೊಂದು ದೊಡ್ಡ ಕೆಲಸವಲ್ಲ. ಈ ಅಪವಾದವನ್ನು ಮೀರಿದ ದುಃಖವು ಬೇರೊಂದಿಲ್ಲ. ಆದುದರಿಂದ, ಲಕ್ಷ್ಮಣಾ, ನಾಳೆ ಬೆಳಂಜಾಮದಲ್ಲಿ ನೀನು ಸೀತೆಯನ್ನು ರಥದ ಮೇಲೇರಿಸಿಕೊಂಡು ತಮಸಾ ನದಿಯ ತೀರದಲ್ಲಿರುವ ವಾಲ್ಮೀಕಿಯ ಆಶ್ರಮ ಪ್ರಾಂತ್ಯದಲ್ಲಿ ಅವಳನ್ನು ಬಿಟ್ಟು ಬಾ. ನನ್ನ ಮಾತಿಗೆ ಇದಿರಾಡಬೇಡ. ಸೀತೆಯನ್ನು ಕುರಿತು ಏನೂ ಹೇಳಬೇಡ. ಸೀತೆ ಋಷಿಗಳ ಆಶ್ರಮಗಳನ್ನು ನೋಡಬೇಕೆಂದು ಅಪೇಕ್ಷೆಪಟ್ಟಿದ್ದಾಳೆ. ಹೀಗೆ ಮಾಡಿದರೆ ಅವಳ ಅಪೇಕ್ಷೆ ತೀರುತ್ತದೆ. ಅವಳೂ ನಿನ್ನೊಂದಿಗೆ ಸಂತೋಷದಿಂದಲೇ ಹೊರಡುತ್ತಾಳೆ. ಬಿಟ್ಟು ಬಂದುಬಿಡು" ಎಂದನು ರಾಮ.

ಇಷ್ಟು ಹೇಳಿ ರಾಮನು ನಿಟ್ಟುಸಿರು ಬಿಡುತ್ತ ಅಲ್ಲಿಂದೆದ್ದು ಅಂತಃಪುರಕ್ಕೆ ಹೋಗಿಬಿಟ್ಟನು.

ಮರುದಿನ ಬೆಳಗಾಗುತ್ತಲೇ ಲಕ್ಷ್ಮಣನು ಸುಮಂತ್ರನ ಬಳಿಗೆ ಹೋದನು. ಲಕ್ಷ್ಮಣನ ನಡೆ ನುಡಿ ಭಾವನೆಗಳೆಲ್ಲವೂ ದೀನಾತಿದೀನವಾಗಿದ್ದಿತು. ಅವನು ಸುಮಂತ್ರನೊಂದಿಗೆ, "ಸೀತೆಯನ್ನು ಮುನಿಗಳ ಆಶ್ರಮಗಳ ಕಡೆಗೆ ಕರೆದೊಯ್ದು ಬಿಟ್ಟು ಬರುವಂತೆ ರಾಮನ ಆಜ್ಞೆಯಾಗಿದೆ. ನಾನು ಸೀತೆಯನ್ನು ಕರೆದುಕೊಂಡು ಈಗಲೇ ಹೊರಡಲಿದ್ದೇನೆ. ಬೇಗನೇ ರಥವನ್ನು ಸಿದ್ಧಮಾಡು. ಸೀತೆಗಾಗಿ ರಥದಲ್ಲಿ ಮೆತ್ತಗಿನ ಆಸನವನ್ನು ಸಿದ್ಧಪಡಿಸಿಡು" ಎಂದನು.

ಸುಮಂತ್ರನು ತಡಮಾಡದೆ ರಥವನ್ನು ಅಣಿಗೊಳಿಸಿ ತಂದನು. ಕೂಡಲೇ ಲಕ್ಷ್ಮಣನು ಸೀತೆಯ ಬಳಿಗೆ ಹೋಗಿ, "ಅಮ್ಮಾ, ಋಷ್ಯಾಶ್ರಮಗಳನ್ನು ನೋಡಬೇಕೆಂದು ಮಹಾರಾಜನೊಂದಿಗೆ ಹೇಳಿದೆಯಂತೆ. ಮಹಾರಾಜನ ಆಜ್ಞೆಯಾಗಿದೆ. ತಮಸಾ ತೀರದಲ್ಲಿರುವ ಆಶ್ರಮಗಳ ಕಡೆಗೆ ಹೋಗೋಣ. ಬೇಗನೆ ಹೊರಡು. ನಮ್ಮ ಅಣ್ಣನ ಆಜ್ಞೆಯಂತೆ ನಾನು ನಿನ್ನನ್ನು ಕರೆದುಕೊಂಡು ಹೋಗುತ್ತೇನೆ" ಎಂದನು.

ಆ ಮಾತುಗಳನ್ನು ಕೇಳಿ ಸೀತೆಗೆ ಪರಮಾನಂದವಾಯಿತು. ಬೆಲೆಬಾಳುವ ಪಟ್ಟೆವಸ್ತ್ರಗಳನ್ನು, ಆಭರಣಗಳನ್ನು ಮುನಿಪತ್ನಿಯರಿಗೆ ಕೊಡಲಿಕ್ಕಾಗಿ ತೆಗೆದುಕೊಂಡು ರಥದ ಮೇಲೇರಿ ಲಕ್ಷ್ಮಣನೊಂದಿಗೆ ಹೊರಟಳು.



ರಥವು ವೇಗವಾಗಿ ಹೋಗುತ್ತಿರಲು, ಸೀತೆಗೆ ದುಃಶಕುನಗಳು ಕಂಡುಬಂದುವು. ಆ ಸಂಗತಿಯನ್ನು ಅವಳು ಲಕ್ಷ್ಮಣನೊಂದಿಗೆ ಹೇಳಿ, "ಅತ್ತೆಯರೆಲ್ಲಾ ಕ್ಷೇಮವಾಗಿರುವರಷ್ಟೇ ?" ಎಂದಳು.

ಅವಳ ಮಾತಿನಿಂದ ಲಕ್ಷ್ಮಣನ ಗುಂಡಿಗೆ ಡವಡವಿಸಲು, ಹತ್ತೊತ್ತಿಕೊಂಡು ತುಟಿಗಳಲ್ಲಿ ನಗು ತೋರಿಸಿ, "ಅವರೆಲ್ಲರೂ ಕ್ಷೇಮವಾಗಿರುವರು" ಎಂದಷ್ಟೇ ಹೇಳಿದನು.

ಹಗಲಿಡೀ ಪ್ರಯಾಣ ಮಾಡಿ, ರಾತ್ರಿಯಾಗುವಷ್ಟರಲ್ಲಿ ರಥವು ಗೋಮತೀ ತೀರವನ್ನು ತಲಪಿತು. ಆ ರಾತ್ರಿಯನ್ನು ಅಲ್ಲಿಯೇ ಕಳೆದು ಬೆಳಗಾಗುತ್ತಲೇ ಮತ್ತೆ ಅಲ್ಲಿಂದ ಹೊರಟು ಮಧ್ಯಾಹ್ನದ ಹೊತ್ತಿಗೆ ತಮಸಾ ತೀರ ತಲಪಿದರು. ತಮಸಾ ನದಿಯನ್ನು ನೋಡಿದ ಕೂಡಲೇ ಲಕ್ಷ್ಮಣನಿಗೆ ದುಃಖವನ್ನು ತಾಳಲಾಗಲಿಲ್ಲ.

ಅದನ್ನು ನೋಡಿ ಸೀತೆ, "ಇದೇನು ಲಕ್ಷ್ಮಣಾ ! ಏಕೆ ಈ ಕಣ್ಣೀರು ? ಅಳುವುದೇಕೆ ? ಬಹಳ ಕಾಲದ ನನ್ನ ಅಪೇಕ್ಷೆ ನೆರವೇರುವುದನ್ನು ನೋಡಿ ನಾನು ಸಂತೋಷದಲ್ಲಿರುವಾಗ, ನಿನ್ನ ದುಃಖದಿಂದ ನನ್ನ ಸಂತೋಷಕ್ಕೆ ಭಂಗಪಡಿಸುವೆಯೇಕೆ ? ನನ್ನನ್ನು ಬೇಗನೇ ತಮಸಾ ನದಿಯನ್ನು ದಾಟಿಸಿ ಮುನಿಗಳ ಆಶ್ರಮಕ್ಕೆ ಕರೆದುಕೊಂಡು ಹೋಗು. ಮುನಿಗಳ ಪತ್ನಿಯರಿಗೆ ಈ ಕಾಣಿಕೆಗಳನ್ನೆಲ್ಲಾ ಕೊಡುತ್ತೇನೆ. ಇವತ್ತು ಒಂದು ರಾತ್ರಿಯನ್ನು ಇಲ್ಲಿ ಕಳೆದು, ನಾಳೆ ಬೆಳಿಗ್ಗೆ ಅಯೋಧ್ಯೆಗೆ ಹಿಂದಿರುಗಿ ಹೋಗೋಣ. ರಾಮನನ್ನು ಬಿಟ್ಟು ಬಂದದ್ದು ನನಗೂ ದುಃಖವಾಗೇ ಇದೆ" ಎಂದಳು ಸೀತೆ.

ಲಕ್ಷ್ಮಣನು ಕಣ್ಣುಗಳನ್ನು ಒರೆಸಿಕೊಂಡು, ಸಮೀಪದಲ್ಲಿದ್ದ ದೋಣಿಯವರನ್ನು ಕರೆದು ದೋಣಿಯನ್ನು ಸಿದ್ಧಪಡಿಸಲು ಹೇಳಿದನು. ಅದರಲ್ಲಿ ಸೀತೆಯೊಂದಿಗೆ ನದಿಯನ್ನು ದಾಟಿದ್ದೂ ಆಯಿತು. ಸುಮಂತ್ರನು ರಥದೊಂದಿಗೆ ಆಚೆಯ ತೀರದಲ್ಲೇ ಉಳಿದನು.

ತಮಸಾ ನದಿಯ ಆಚೆಯ ತೀರದಲ್ಲಿ ದೋಣಿಯಿಂದ ಇಳಿದ ಮೇಲೆ ಲಕ್ಷ್ಮಣನು ಸೀತೆಯ ಮುಂದೆ ಕೈ ಜೋಡಿಸಿ ನಿಂತು, "ಸೀತಾದೇವೀ ! ಅಣ್ಣನು ನನ್ನ ಗುಂಡಿಗೆಯಲ್ಲಿ ಶೂಲವನ್ನು ಚುಚ್ಚಿಬಿಟ್ಟನು. ಇಷ್ಟೊಂದು ಪಾಪದ ಕೆಲಸ ಮಾಡುವುದಕ್ಕಿಂತಲೂ ನಾನು ಸತ್ತುಹೋಗಿಬಿಟ್ಟರೆ ಚೆನ್ನಾಗಿತ್ತು" ಎಂದು ದುಃಖವಿವಶನಾಗಿ ಕುಸಿದು ಕುಳಿತುಬಿಟ್ಟನು.

ಸೀತೆ ಅವನ ಸ್ಥಿತಿಯನ್ನು ನೋಡಿ ಗಾಬರಿ ಬೀಳುತ್ತ, "ಲಕ್ಷ್ಮಣಾ, ನಿನ್ನ ಮಾತುಗಳು ನನಗೇನೂ ಅರ್ಥವಾಗಲಿಲ್ಲ. ನೀನು ಎಂತಹುದೋ ಉದ್ರೇಕದಲ್ಲಿರುವ ಹಾಗೆ ಕಾಣುತ್ತದೆ. ನಿನ್ನ ಸಂಕಟಕ್ಕೆ ಕಾರಣವೇನೆಂದು ಸ್ವಲ್ಪ ಸ್ಪಷ್ಟವಾಗಿ ಹೇಳಿಬಿಡು. ಇಲ್ಲದಿದ್ದರೆ ನಿನ್ನಣ್ಣನ ಮೇಲೆ ಆಣೆ !" ಎಂದಳು.

ಆಗ ಲಕ್ಷ್ಮಣನು ಸೀತೆಯೊಂದಿಗೆ, "ಅಮ್ಮಾ, ನನ್ನ ಅಣ್ಣ ರಾಮನು ಸ್ನೇಹಿತರ ಜೊತೆಯಲ್ಲಿ

ಮಾತಾಡಿಕೊಂಡಿರುವಾಗ, ನಿನ್ನ ವಿಷಯದಲ್ಲಿ ಭಯಂಕರವಾದ ಲೋಕಾಪವಾದ ಬಂದಿರುವುದನ್ನು ಕೇಳಿಬಿಟ್ಟನು. ಆದರಿಂದ ಅಣ್ಣನ ಹೃದಯವು ಕುದಿದುಹೋಯಿತು. ನಿನ್ನನ್ನು ಬಿಟ್ಟುಬಿಟ್ಟಿದ್ದಾನಮ್ಮಾ ! ನಿನ್ನಿಂದ ಯಾವ ದೋಷವೂ ಇಲ್ಲವೆಂದು ನನ್ನಣ್ಣನಿಗೇ ಗೊತ್ತಿದೆ. ನನಗೂ ಗೊತ್ತಿದೆ. ಆದರೆ ಅಪವಾದಕ್ಕೆ ಹೆದರಿ ಹೀಗೆ ಮಾಡಿದ್ದಾನೆ. ನಿನ್ನನ್ನು ಇಲ್ಲಿಯೇ ಬಿಟ್ಟುಕೊಟ್ಟು ನಾನು ಮಾತ್ರ ಅಯೋಧ್ಯೆಗೆ ಹಿಂದಿರುಗಿ ಹೋಗಬೇಕು. ಮಾತಾಡದೆ ಹೇಳಿದ ಕೆಲಸ ಮಾಡಿಬರುವಂತೆ ರಾಮಾಜ್ಞೆ ನನಗೆ. ನೀನು ಮನಸ್ಸನ್ನು ಹೆಚ್ಚಾಗಿ ಕಷ್ಟಕ್ಕೆ ಬೀಳಿಸದೆ ಪುಣ್ಯಪ್ರದವಾದ ಈ ಮುನಿಗಳ ಆಶ್ರಮಗಳಲ್ಲೇ ಇರಬೇಕು, ವಾಲ್ಮೀಕಿ ಮಹಾಮುನಿ ನಮ್ಮ ತಂದೆಗೆ ಆಪ್ತ ಸ್ನೇಹಿತನು. ಆತನನ್ನು ಆಶ್ರಯಿಸಿ ಸುಖವಾಗಿರು ತಾಯೇ !" ಎಂದನು.

ಈ ಮಾತುಗಳನ್ನು ಕೇಳಿ ಸೀತೆ ಒಮ್ಮೆಗೇ ಸ್ತಂಭೀಭೂತಳಾದಳು.

ಆಮೇಲೆ ಅವಳು ಎಚ್ಚರಕ್ಕೆ ಬಂದು ದೀನತೆಯಿಂದ ಅಳುತ್ತ, "ಲಕ್ಷ್ಮಣಾ ! ನಾನು ಕಷ್ಟಗಳನ್ನು ಅನುಭವಿಸಲಿಕ್ಕೇ ಹುಟ್ಟಿದವಳು. ಪೂರ್ವಜನ್ಮದಲ್ಲಿ ಏನೇನೋ ಪಾಪ ಮಾಡಿರಬೇಕು. ಯಾವ ದಂಪತಿಗಳಿಗೋ ಭೇದವನ್ನುಂಟುಮಾಡಿರಬೇಕು. ಅರಣ್ಯವಾಸದಲ್ಲಿರುವಾಗ ರಾಮನು ಹತ್ತಿರವಿದ್ದು ಸಮಾಧಾನ ಹೇಳುತ್ತಿದ್ದರೂ ನಾನು ದುಃಖಿಸುತ್ತಲೇ ಇದ್ದೆನು. ಅಂತಹ ರಾಮನು ಕೂಡಾ ಜತೆಯಲ್ಲಿಲ್ಲದ ಈ ಅರಣ್ಯವಾಸವು ಹೇಗಿರುವುದೋ ಆಲೋಚನೆ ಮಾಡು. ಈ ನನ್ನ ದುಃಖವನ್ನು ಇಲ್ಲಿ ಯಾರೊಡನೆ ಹೇಳಿಕೊಳ್ಳಲಿ ? ನಿನ್ನನ್ನು ನಿನ್ನ ಗಂಡ ಏಕೆ ಬಿಟ್ಟನೆಂದು ಮುನಿಗಳು ಕೇಳಿದರೆ ಏನು ಹೇಳಲಿ ? ಈ ನದಿಯಲ್ಲಿ ಬಿದ್ದು ಸಾಯಬಹುದು. ಆದರಿಂದ ನಿಮ್ಮ ವಂಶವು ಇನ್ನಿಷ್ಟು ಅಪವಾದಕ್ಕೆ ಬೀಳುತ್ತದೆ. ಅದು ಮತ್ತಿಷ್ಟು ಅಪಹಾಸ್ಯವಾಗುತ್ತದೆ. ನಿನ್ನ ಅಣ್ಣನ ಆಜ್ಞೆಯಂತೆ ನಡೆಯಬೇಕಾದುದು ನಿನ್ನ ಧರ್ಮವೇ, ಕರ್ತವ್ಯವೇ. ಅಪ್ಪಾ ಲಕ್ಷ್ಮಣಾ, ಅತ್ತೆಗಳೆಲ್ಲರಿಗೂ ನನ್ನ ನಮಸ್ಕಾರ ಹೇಳು. ಮಹಾರಾಜನ ಕ್ಷೇಮವನ್ನು ಚಿಂತಿಸುತ್ತಾ ಆತನಿಗೆ ನಾನು ಸಾಷ್ಟಾಂಗ ನಮಸ್ಕಾರ ಮಾಡುತ್ತೇನೆಂದು ಹೇಳು. ಆತನಿಗೆ ಬಂದ ಅಪವಾದವನ್ನು ಹೋಗಲಾಡಿಸಬೇಕಾದುದು ನನಗೂ ವಿಧಿಯೇ. ಧೈರ್ಯದಿಂದ ರಾಜ್ಯಪಾಲನೆ ಮಾಡುತ್ತ ತಮ್ಮಂದಿರನ್ನೂ ಪ್ರಜೆಗಳನ್ನೂ ಒಂದೇ ವಿಧವಾಗಿ ನೋಡುತ್ತ ಲೋಕದಲ್ಲಿ ಸಾಟಿಯಿಲ್ಲದ ಕೀರ್ತಿಯನ್ನು ಸಂಪಾದಿಸಬೇಕೆಂದು ನಾನು ಅಪೇಕ್ಷಿಸುವುದಾಗಿಯೂ ಆತನೊಂದಿಗೆ ಮರೆಯದೆ ಹೇಳು" ಎಂದಳು.






ಲಕ್ಷ್ಮಣನು ಏನೂ ಮಾತಾಡದೆ ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಸೀತೆಗೆ ಪ್ರದಕ್ಷಿಣೆ ಮಾಡಿ ಸಾಷ್ಟಾಂಗವಾಗಿ ನಮಸ್ಕರಿಸಿ, ದೋಣಿಯಲ್ಲಿ ಏರಿ ನದಿಯನ್ನು ದಾಟಿ ರಥದ ಮೇಲೆ ಹತ್ತಿ, ಅನಾಥೆಯ ಹಾಗೆ ಆಚೆಯ ತೀರದಲ್ಲಿ ಅಳುತ್ತಾ ನಿಂತಿರುವ ಸೀತೆಯನ್ನು ಮತ್ತೆ ಮತ್ತೆ ತಿರುಗಿ ನೋಡುತ್ತ ದೂರ ದೂರ ಹೊರಟು ಹೋದನು. ರಥವು ಮುಂದೆ ಹೋಗುತ್ತಿದ್ದರೂ ಅವನ ಲಕ್ಷ್ಯ ಹಿಂದೆ ಹಿಂದೆ ಎಳೆಯುವ ಹಾಗಿತ್ತು.

ಸೀತೆ ಆ ರಥವು ಕಣ್ಮರೆಯಾದ ದಿಕ್ಕನ್ನೇ ನೋಡುತ್ತ ನಿಂತು ತನ್ನ ಗತಿಯನ್ನು ನೆನೆದು ತಾಳಲಾಗದೆ ಗಟ್ಟಿಯಾಗಿ ಅಳಲಿಕ್ಕೇ ತೊಡಗಿದಳು. ಅವಳ ಅಳುವಿಗೆ ನಾಲ್ಕು ಸುತ್ತಲೂ ಇರುವ ನಿರ್ಜನವಾದ ಅರಣ್ಯ ಪ್ರದೇಶವು ಮಾತ್ರ ಸುಮ್ಮನೆ ಮರುಮೊಳಗು ಎಬ್ಬಿಸುತ್ತಿತ್ತು.

ಹೀಗೆ ಆ ನಿರ್ಜನಾರಣ್ಯದಲ್ಲಿ ಒಬ್ಬಂಟಿಯಾಗಿದ್ದು ರೋದಿಸಿಕೊಂಡಿರುವ ಸೀತೆಯನ್ನು, ಆಕಡೆಗೆ ಸಮಿಧೆಗಳ ಸಂಗ್ರಹಕ್ಕಾಗಿ ಬಂದಿದ್ದ ಕೆಲವು ಮುನಿ ಕುಮಾರರು ನೋಡಿ, ಓಡುತ್ತಾ ವಾಲ್ಮೀಕಿಯ ಬಳಿಗೆ ಹೋಗಿ, "ತಮಸಾ ತೀರದಲ್ಲಿ ಯಾವಳೋ ಒಬ್ಬಳು ಯಾವ ಕಾರಣದಿಂದಲೋ ಒಂದೇ ಸಮನೆ ಅಳುತ್ತಾ ದಿಕ್ಕು ದಿಕ್ಕು ನೋಡುತ್ತಾ ಇದ್ದಾಳೆ. ಆಕೆ ನೋಡಿದರೆ ಆಕಾಶದಿಂದ ಇಳಿದು ಬಂದ ದೇವತಾ ಸ್ತ್ರೀಯ ಹಾಗೆಯೇ ಕಾಣುತ್ತಾಳೆ. ಅವಳಿಗೆ ಯಾರೂ ಜತೆ ಇರುವಂತೆ ಕಾಣುವುದಿಲ್ಲ. ನೀವು ಬೇಗ ಹೋಗಿ ಅವಳನ್ನು ಒಂದುಬಾರಿ ನೋಡಬೇಕು. ನಿಮ್ಮ ಅಪ್ಪಣೆಯು ಇಲ್ಲದೆ ನಾವಾಗಿ ಅವಳನ್ನು ಮಾತಾಡಿಸಲು ಭಯಪಡುತ್ತೇವೆ" ಎಂದು ಹೇಳಿದರು.

ವಾಲ್ಮೀಕಿ ಮಹಾಮುನಿ ಕೂಡಲೇ ಎದ್ದು ಹೊರಟನು. ಅವನ ಹಿಂದೆ ಶಿಷ್ಯರೂ ಹೊರಟರು. ಒಬ್ಬನು ದಾರಿ ತೋರಿಸುತ್ತಾ ಹೋದನು. ಒಬ್ಬ ಶಿಷ್ಯ ಅರ್ಘ್ಯ ಕಲಶವನ್ನು ಎತ್ತಿಕೊಂಡು ಹೊರಟನು. ಉಳಿದವರು ಹಿಂದೆಯೇ ಅಲ್ಲಲ್ಲೇ ನಿಂತರು.

೯. ಸೀತೆಯ ವಾಲ್ಮೀಕಿ ಆಶ್ರಮ ಪ್ರವೇಶ




ಹೀಗೆ ವಾಲ್ಮೀಕಿ ಸೀತೆ ಇರುವ ಸ್ಥಳಕ್ಕೆ ಬಂದು ಅವಳ ಗುರುತು ಹಿಡಿದು, "ದಶರಥನ ಪ್ರಿಯ ಸೊಸೆಯಾದ ಸೀತಾದೇವೀ! ನಿನಗೆ ಸುಸ್ವಾಗತ. ಅಮ್ಮಾ, ನೀನು ಇಲ್ಲಿಗೆ ಹೇಗೆ ಬಂದು ಸೇರಿದೆ ಎಂಬುದೆಲ್ಲಾ ನಾನು ಊಹಿಸಿದ್ದೇನೆ. ಮೂರು ಲೋಕಗಳ ಸಮಾಚಾರವೂ ನನಗೆ ತಿಳಿಯುತ್ತಾ ಇರುತ್ತದೆ. ಇಲ್ಲಿ ನಾನಿರುವಾಗ ನಿನಗೆ ಯಾವ ಭಯವೂ ಬೇಡ. ನನ್ನ ಆಶ್ರಮವು ಸಮೀಪದಲ್ಲಿಯೇ ಇದೆ. ಅಲ್ಲಿ ತಾಪಸ ಸ್ತ್ರೀಯರೂ ಇದ್ದಾರೆ. ಇನ್ನು ದುಃಖಿಸಬೇಡಮ್ಮಾ. ನನ್ನ ಅರ್ಘ್ಯವನ್ನು ಸ್ವೀಕರಿಸು. ನನ್ನ ಆಶ್ರಮದಲ್ಲಿ ನಿನ್ನ ತೌರು ಮನೆಯಲ್ಲಿರುವ ಹಾಗೆಯೇ ಇರಬಹುದು. ಬಾ, ತಾಯೇ ಬಾ!" ಎಂದನು ಪರಮ ವಾತ್ಸಲ್ಯವನ್ನು ಸೂಸುತ್ತ.

ಸೀತೆ ಕಣ್ಣೀರು ಒರೆಸಿಕೊಂಡು ವಾಲ್ಮೀಕಿಗೆ ನಮಸ್ಕಾರ ಮಾಡಿ, ಅವನು ಕೊಟ್ಟ ಅರ್ಘ್ಯವನ್ನು ಸ್ವೀಕರಿಸಿ, ಅವನೊಂದಿಗೆ ಹೊರಟು ಅವನ ಆಶ್ರಮವನ್ನು ಪ್ರವೇಶಿಸಿದಳು.

ವಾಲ್ಮೀಕಿ ಅವಳನ್ನು ಮುನಿಪತ್ನಿಯರಿಗೆ ಒಪ್ಪಿಸಿ, ಸೀತೆಯನ್ನು ಸ್ನೇಹ ಗೌರವಗಳಿಂದ ನೋಡುತ್ತಿರಬೇಕೆಂದು ಅವರಿಗೆಲ್ಲಾ ಹೇಳಿದನು. ಅವರೆಲ್ಲಾ ಸೀತೆಯನ್ನು ಕಟ್ಟಕ್ಕರೆಯಿಂದ ಬರಮಾಡಿಕೊಂಡರು.

ಅಯೋಧ್ಯೆಯ ಕಡೆಗೆ ತಿರುಗಿ ಹೋಗುತ್ತಿದ್ದ ಲಕ್ಷ್ಮಣನು ಸುಮಂತ್ರನೊಂದಿಗೆ, "ಸುಮಂತ್ರಾ, ಅಣ್ಣನಿಗೆ ಸೀತಾವಿಯೋಗದಿಂದ ಎಂತಹ ದುಃಖವು ಸಂಪ್ರಾಪ್ತವಾಯಿತೆಂದು ನೋಡಿದೆಯಷ್ಟೆ? ನಿರ್ದೋಷಿಯಾದ ಸೀತೆಗೆ ಎಂತಹ ಕಷ್ಟವು ಬಂದಿತು ನೋಡು! ನಮಗೇ ತಾಳಲಾಗುವುದಿಲ್ಲ. ಅವಳೇನು ಮಾಡಿಕೊಳ್ಳುವಳೋ?" ಎಂದನು.

ಲಕ್ಷ್ಮಣನ ಮಾತಿಗೆ ಸುಮಂತ್ರನು, "ಲಕ್ಷ್ಮಣಾ, ರಾಮನಿಗೆ ಸುಖವು ಸ್ವಲ್ಪ ಮಾತ್ರವೆಂದೂ ಇಂತಹ ಪ್ರಿಯ ವಿಯೋಗವು ಬರುತ್ತದೆಂದೂ ಪೂರ್ವದಲ್ಲಿ ಮುನಿಗಳು ಹೇಳಿಯೇ ಇದ್ದಾರೆ. ಇದೊಂದು ರಹಸ್ಯ ವಿಷಯ. ನಾನು ನಿನಗೆ ಹೇಳುತ್ತೇನೆ. ಆದರೆ ನೀನು ಮಾತ್ರ ಈ ರಹಸ್ಯವನ್ನು ಭರತ ಶತ್ರುಘ್ನರಿಗೆ ಹೇಳಬಾರದು. ನಿನ್ನೊಳಗೇ ಇರಲಿ" ಎಂದು ಆ ರಹಸ್ಯದ ವಿವರಗಳನ್ನು ಹೇಳಿದನು. ಅದೇನೆಂದರೆ,

ಒಂದು ದಿನ ದಶರಥನು ವಸಿಷ್ಠನ ಆಶ್ರಮಕ್ಕೆ ಹೋದನು. ಆಗ ಅಲ್ಲಿ ಅತ್ರಿ ಮಹಾಮುನಿಯ ಮಗನಾದ ದುರ್ವಾಸನಿದ್ದನು. ದಶರಥನು ಮುನಿಗಳಿಂದ ಸ್ವಾಗತ ಸತ್ಕಾರಗಳನ್ನು ಪಡೆದಾದ ಮೇಲೆ ಮಾತಿನ ಸಂದರ್ಭದಲ್ಲಿ ದುರ್ವಾಸನನ್ನು ನೋಡಿ. "ಮಹಾತ್ಮಾ, ನನ್ನ ಮಕ್ಕಳ ಭವಿಷ್ಯತ್ತು ಹೇಗಾಗುತ್ತದೆ? ನಮ್ಮ ರಾಮನ ಆಯುರ್ದಾಯವೆಷ್ಟು? ಉಳಿದ ಕುಮಾರರು ಎಷ್ಟು ಕಾಲದವರೆಗೆ ಜೀವಿಸುತ್ತಾರೆ? ನಮ್ಮ ರಾಮನಿಗೆ ಎಷ್ಟು ಮಂದಿ ಪುತ್ರ

ರಾಗುತ್ತಾರೆ? ತ್ರಿಕಾಲ ಜ್ಞಾನಿಗಳಾದ ನೀವು ಇದನ್ನೆಲ್ಲಾ ದಯಮಾಡಿ ಹೇಳುವಿರಾ?" ಎಂದು ಪ್ರಶ್ನೆ ಮಾಡಿದನು.

ಇದನ್ನು ಕೇಳಿ ದುರ್ವಾಸನು ಒಂದು ಹಳೆಯ ಸಂಗತಿಯನ್ನು ಹೇಳಿದನು.

ದೇವಾಸುರರ ಯುದ್ಧದಲ್ಲಿ ಸೋತು ಹೋದ ಅಸುರರು, ಭೃಗು ಮಹಾಮುನಿಯ ಪತ್ನಿಯ ಬಳಿಗೆ ಹೋಗಿ ಶರಣಾದರು. ಅವರ ಮೇಲೆ ಕನಿಕರಿಸಿ ಆಕೆ ಅವರಿಗೆ ಅಭಯದಾನ ಮಾಡಿದಳು. ಅದನ್ನು ನೋಡಿ ವಿಷ್ಣು ಕೋಪಗೊಂಡು ತನ್ನ ಚಕ್ರಾಯುಧದಿಂದ ಭೃಗು ಪತ್ನಿಯ ಶಿರಸ್ಸನ್ನು ಖಂಡಿಸಿಬಿಟ್ಟನು. ಅದರಿಂದ ಭೃಗು ಮಹಾಮುನಿ ಕೋಪ ಕೆಂಡವಾಗಿ ವಿಷ್ಣು ಭೂಲೋಕದಲ್ಲಿ ಹುಟ್ಟಿ ಪತ್ನಿಯ ವಿಯೋಗದಿಂದ ತಪಿಸುತ್ತಿರಲೆಂದು ಶಾಪ ಕೊಟ್ಟನು. ಆ ಶಾಪದ ಪ್ರಭಾವದಿಂದ ವಿಷ್ಣು ದಶರಥನ ಕುಮಾರನಾಗಿ ಹುಟ್ಟಿ, ರಾಮನೆಂಬ ಹೆಸರಿನಿಂದ ಪ್ರಸಿದ್ಧನಾದನು.

"ಆದುದರಿಂದ ದಶರಥ ರಾಜಾ, ರಾಮನು ಭೃಗು ಮಹಾಮುನಿಯ ಶಾಪವನ್ನು ಅನುಭವಿಸಲೇಬೇಕಾಗುತ್ತದೆ. ಅವನು ಹನ್ನೊಂದು ಸಾವಿರ ವರ್ಷ ರಾಜ್ಯ ಪರಿಪಾಲನೆ ಮಾಡುತ್ತ ಅಶ್ವಮೇಧ ಯಾಗ ಕೂಡಾ ಮಾಡಿ ಆಮೇಲೆ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಅವನಿಗೆ ಇಬ್ಬರು ಕುಮಾರರು ಹುಟ್ಟುತ್ತಾರೆ. ಅವರಿಗೆ ರಾಮನೇ ಸ್ವತಃ ಪಟ್ಟಾಭಿಷೇಕ ಮಾಡುತ್ತಾನೆ" ಎಂದು ಹೇಳಿದನು ದುರ್ವಾಸ ಮುನಿ.

ಹೀಗೆ ಮಾತಾಡಿಕೊಳ್ಳುತ್ತ ಲಕ್ಷ್ಮಣ ಸುಮಂತ್ರರು ಸಾಯಂಕಾಲವಾಗುವಾಗ ಗೋಮತಿ ಎಂಬ ಸ್ಥಳಕ್ಕೆ ಬಂದು ರಾತ್ರಿಯನ್ನು ಅಲ್ಲಿ ಕಳೆದರು.

ಮರುದಿನ ಬೆಳಗ್ಗೆ ಅವರು ಮತ್ತೆ ಪ್ರಯಾಣ ಮಾಡಿ ಅಯೋಧ್ಯೆಗೆ ಹೋಗುತ್ತಿರುವಾಗ. ಇನ್ನು ಚಿಂತೆಯಲ್ಲಿ ಮುಳುಗಿದ ಅಣ್ಣ ರಾಮನೊಂದಿಗೆ ಏನೆಂದು ಹೇಳುವುದೋ ಎಂದು ಲಕ್ಷ್ಮಣನು ತಳಮಳಕ್ಕೆ ಬಿದ್ದನು.





ಅವರ ರಥವು ಅಯೋಧ್ಯೆಯನ್ನು ಮುಟ್ಟಿತು. ರಾಜಪ್ರಾಸಾದದ ಮುಂದೆ ಲಕ್ಷ್ಮಣನು ರಥದಿಂದಿಳಿದು ಒಳಗೆ ಪ್ರವೇಶಿಸಿ, ದೀನಭಾವದಲ್ಲಿ ಕಣ್ಣೀರು ಸುರಿಸುತ್ತಾ ಇರುವ ರಾಮನಿಗೆ ನಮಸ್ಕಾರ ಮಾಡಿ, "ನಿಮ್ಮಾಜ್ಞೆಯಾದಂತೆ ಸೀತಾದೇವಿಯನ್ನು ಗಂಗಾ ತೀರದಲ್ಲಿ ವಾಲ್ಮೀಕಿ ಮಹಾಮುನಿಯ ಆಶ್ರಮ ಪ್ರಾಂತದಲ್ಲಿ ಬಿಟ್ಟು ಬಂದಿದ್ದೇನೆ. ಇನ್ನು ಚಿಂತಿಸಿಕೊಂಡಿರಬಾರದು. ವೃದ್ಧಿಯಿಂದ ಕ್ಷಯವೂ, ಉನ್ನತಿಯಿಂದ ಪತನವೂ, ಸಂಯೋಗದಿಂದ ವಿಯೋಗವೂ ತಪ್ಪುವುದಿಲ್ಲವಷ್ಟೆ? ಬಂದಿರುವ ಅಪವಾದವು ಇನ್ನು ಅದರಷ್ಟಕ್ಕೆ ಅದು ತಾನಾಗಿ ಹೋಗಿಬಿಡುತ್ತದೆ" ಎಂದನು.

"ಲಕ್ಷ್ಮಣಾ! ನನ್ನ ಮಾತನ್ನು ನಡೆಸಿರುವಿ. ಬಹಳ ಸಂತೋಷ. ನನಗೆ ಚಿಂತೆಯೇನೂ ಇಲ್ಲ. ಸರಿಯಾಗಿಯೇ ಇದ್ದೇನೆ ಲಕ್ಷ್ಮಣಾ" ಎಂದನು ರಾಮ. ಆಗ ರಾಮನು ನಾಲ್ಕು ದಿನಗಳಿಂದ ಪ್ರಜೆಗಳ ವಿಷಯವನ್ನು ವಿಚಾರಿಸಿರಲಿಲ್ಲ. ಅದು ತಪ್ಪು. ನಿದ್ದೆ ಬಾರದಿರುವುದರಿಂದ ರಾಮನು ಆ ಸಂಗತಿಯನ್ನು ಲಕ್ಷ್ಮಣನೊಂದಿಗೆ ಹೇಳಿ, ಅದಕ್ಕೆ ತಾರ್ಕಣೆಯಾಗಿ ನೃಗ ಮಹಾರಾಜನ ಕಥೆಯನ್ನು ಲಕ್ಷ್ಮಣನಿಗೆ ಹೇಳಿದನು. ಅದರ ತಾರ್ಕಣೆ ಹೇಗೆಂದರೆ,

ಪೂರ್ವ ಕಾಲದಲ್ಲಿ ನೃಗ ಮಹಾರಾಜನು ಕೋಟಾನುಕೋಟಿ ಪಶುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಅವನು ದಾನ ಮಾಡಿದ ಪಶುಗಳಲ್ಲಿ ಒಂದು ಪಶು ಹೇಗೋ ಪ್ರಮಾದವಶಾತ್ತಾಗಿ ಮತ್ತೆ ಬಂದು ನೃಗ ಮಹಾರಾಜನ ಪಶು ಮಂದೆಯೊಂದಿಗೆ ಕೂಡಿಹೋಯಿತು. ಆ ಸಂಗತಿ ತಿಳಿಯದೆ ರಾಜನು ಆ ಪಶುವನ್ನು ಮತ್ತೊಬ್ಬ ಬ್ರಾಹ್ಮಣನಿಗೆ ದಾನ ಮಾಡಿದನು. ಮೊದಲು ದಾನ ಪಡೆದ ಬ್ರಾಹ್ಮಣನು ತನ್ನ ಪಶುವನ್ನು ಹುಡುಕುತ್ತಾ ತಿರುಗಿಕೊಂಡು ಕನಖಲವೆಂಬ ಸ್ಥಳದಲ್ಲಿ ತನ್ನ ಪಶುವನ್ನು ಆ ಎರಡನೇ ಬ್ರಾಹ್ಮಣನ ಮನೆಯಲ್ಲಿ ಗುರುತಿಸಿ, ತಾನು ಅದಕ್ಕಿಟ್ಟ ಹೆಸರನ್ನು ಹೇಳಿ ಅದನ್ನು ಕರೆದನು. ಆ ಪಶು ತನ್ನ ಹಳೆಯ ಯಜಮಾನನ ಕಂಠಸ್ವರದ ಗುರುತು ಹಿಡಿದು, ಕಟ್ಟಿದ ಹಗ್ಗ ಕಡಿದುಕೊಂಡು ಅವನೊಂದಿಗೆ ಹೊರಟಿತು.

ಅನನ್ನು ನೋಡಿದ ಎರಡನೇ ಬ್ರಾಹ್ಮಣನು ಆಶ್ಚರ್ಯದಿಂದ "ನನ್ನ ಪಶುವನ್ನು ನೀನು ಸಾಗಿಸಿಕೊಂಡು ಹೋಗುವುದೇನಿದು ಅನ್ಯಾಯ! ಇದು ನನಗೆ ನೃಗ ಮಹಾರಾಜನು ದಾನಕೊಟ್ಟ ಪಶು" ಎಂದನು.

"ಆ ನೃಗ ಮಹಾರಾಜನೇ ಇದನ್ನು ನನಗೆ ದಾನಮಾಡಿದ್ದು!" ಎಂದನು ಮೊದಲನೇ ಬ್ರಾಹ್ಮಣ.

ಈ ತಗಾದೆ ಅವರಿಬ್ಬರ ನಡುವೆ ಪರಿಷ್ಕಾರವಾಗದೆ ಹೋದುದರಿಂದ ಅವರಿಬ್ಬರೂ ನೆಟ್ಟಗೆ

ನೃಗ ಮಹಾರಾಜನ ಕಡೆಗೇ ಬಂದರು. ದ್ವಾರಪಾಲಕರಿಂದಾಗಿ ಅವರಿಗೆ ರಾಜದರ್ಶನವಾಗದೇ ಹೋಯಿತು. ಹೊರಗಿನ ದ್ವಾರದ ಹತ್ತಿರ ಅನೇಕ ದಿನಗಳವರೆಗೆ ಕಾದು ಬಿದ್ದಿರ ಬೇಕಾಯಿತು. ಕಡೆಗೆ ಆ ಬ್ರಾಹ್ಮಣರಿಬ್ಬರೂ ಕೋಪಾಗ್ರಹಕ್ಕೊಳಗಾಗಿ ರಾಜನನ್ನು ಉದ್ದೇಶಿಸಿ, ಅವನು ಊಸರವಲ್ಲಿಯಾಗಿ ಯಾರ ಕಣ್ಣಿಗೂ ಕಾಣದಂತೆ ಗುಂಡಿಯೊಳಗೇ ಜೀವಿಸುತ್ತಿರಲೆಂದು ಶಾಪ ಕೊಟ್ಟರು.

ಚಾರರು ಹೆದರಿ ಆ ಸಂಗತಿಯನ್ನು ರಾಜನಿಗೆ ತಿಳಿಸಲು. ರಾಜನು ಗಾಬರಿಯಿಂದ ಬೇಗ ಬೇಗ ಬಂದು ಅವರ ಕಾಲಿಗೆ ಬಿದ್ದು ಕ್ಷಮೆ ಕೇಳಿಕೊಳ್ಳಲು, ಯದುವಂಶದಲ್ಲಿ ವಾಸುದೇವನು ಹುಟ್ಟಿ ಶಾಪ ವಿಮೋಚನೆ ಮಾಡುತ್ತಾನೆಂದು ಸಮಾಧಾನ ಹೇಳಿ ಆ ಬ್ರಾಹ್ಮಣರು ಹೊರಟು ಹೋದರು.

ಆಮೇಲೆ ನೃಗ ಮಹಾರಾಜನು ವಸುವೆಂಬ ತನ್ನ ಕುಮಾರನಿಗೆ ಪಟ್ಟಗಟ್ಟಿ, ತಾನು ಯಾರ ಕಣ್ಣಿಗೂ ಬೀಳದಂತೆ ಓತಿಯ ಜೀವಿತವನ್ನು ಸುಖವಾಗಿ ಕಳೆಯಲಿಕ್ಕಾಗಿ ಕೆಲವು ಗುಂಡಿಗಳನ್ನು ತೋಡಿಸಿ ಅವುಗಳ ಸುತ್ತಲೂ ಹೂ ಗಿಡಗಳನ್ನು ನೆಡಿಸಿ ಒಳ್ಳೆಯ ಪರಿಮಳಮಯವಾಗುವಂತೆ ಏರ್ಪಡಿಸಿದನು. ಈಗ ತನಗೆ ಕೂಡಾ ಅಂತಹ ದುಃಖ ಪರಿಸ್ಥಿತಿಯೇ ಬಂದಿತ್ತು.

ಹೀಗೆ ರಾಮನು ಲಕ್ಷ್ಮಣನಿಗೆ ನೃಗ ಮಹಾರಾಜನ ಕಥೆಯನ್ನು ಹೇಳಿ, ಅನಂತರ ನಿಮಿ ಎಂಬವನ ಕಥೆಯನ್ನೂ ಹೇಳಿದನು:

ಇಕ್ಷ್ವಾಕು ಮಹಾರಾಜನ ಮಕ್ಕಳಲ್ಲಿ ನಿಮಿ ಹನ್ನೆರಡನೆಯವನು. ಅವನು ಒಂದು ದಿವ್ಯವಾದ ಪುರವನ್ನು ಕಟ್ಟಿಸಿ, ಅದಕ್ಕೆ ವೈಜಯಂತವೆಂದು ಹೆಸರಿಟ್ಟನು. ಅವನು ತನ್ನ ತಂದೆಗೆ ಸಂತೋಷವನ್ನುಂಟುಮಾಡಲು ಒಂದು ಯಜ್ಞವನ್ನು ಪ್ರಾರಂಭಿಸಿ ವಸಿಷ್ಠನನ್ನು ಋತ್ವಿಕ್ಕನಾಗಿರಬೇಕೆಂದು ಪ್ರಾರ್ಥಿಸಿದನು. ಆದರೆ ವಸಿಷ್ಠನು, ತನ್ನನ್ನು ಇಂದ್ರನು ಮೊದಲೇ ಯಜ್ಞ ಮಾಡಿಸಲು ಕೇಳಿಕೊಂಡುದರಿಂದ, ಇಂದ್ರನ ಯಜ್ಞವು ಪೂರ್ತಿಯಾದ





ಮೇಲೆ ತಾನು ಬಂದು ನಿಮಿಯ ಯಜ್ಞವನ್ನು ಪೂರ್ತಿಗೊಳಿಸುತ್ತೇನೆಂದು ಹೇಳಿ ಹೊರಟುಹೋಗಿ ಬಿಟ್ಟನು. ಹೀಗಾದುದರಿಂದ ನಿಮಿ ಗೌತಮನನ್ನು ಋತ್ವಿಕ್ಕಾಗಿ ಇಟ್ಟುಕೊಂಡು ತನ್ನ ಯಜ್ಞಮಾಡಿ ಮುಗಿಸಿದನು. ಇಂದ್ರನ ಯಜ್ಞವು ಪೂರ್ತಿಯಾದ ಕೂಡಲೇ ವಸಿಷ್ಠನು ತಿರುಗಿ ಬಂದು, ಯಜ್ಞ ಪೂರ್ತಿಯಾದುವನ್ನು ತಿಳಿದು, ನಿಮಿ ತನಗಾಗಿ ಕಾದು ಕೊಂಡಿಲ್ಲದ್ದನ್ನು ನೋಡಿ, ಗೌತಮನಿಂದ ಯಜ್ಞ ಕಾರ್ಯ ಮುಗಿಸಿದ್ದಕ್ಕೆ ಕೋಪಿಸಿ, ರಾಜನ ಹತ್ತಿರ ಹೋದನು.

ಅದೇ ಸಮಯದಲ್ಲಿ ನಿಮಿ ನಿದ್ದೆ ಮಾಡಿ ಕೊಂಡಿದ್ದನು. ವಸಿಷ್ಠನು ನಿಮಿಯ ದರ್ಶನಕ್ಕೆ ಬಹಳ ಹೊತ್ತು ಕಾದು ಬೇಸತ್ತು ಬೇಕೆಂದೇ ನಿಮಿ ತನ್ನನ್ನು ಕಾಯಿಸುತ್ತಿದ್ದಾನೆಂದು ತಿಳಿದು ದೊಡ್ಡ ಕೋಪದಿಂದ, "ಹೇ, ನಿಮಿ ರಾಜಾ! ಇನ್ನೊಬ್ಬ ರಿಂದ ಯಜ್ಞ ಮಾಡಿಸಿಕೊಂಡು ನನ್ನನ್ನು ಅವಮಾನಿಸಿದ್ದು ಸಾಲದೆ ನಿಶ್ಚಿಂತೆಯಿಂದ ಮಲಗಿರುವ ನಿನ್ನ ಶರೀರವು ನಿಶ್ಚೇತನವೇ ಆಗಲಿ!" ಎಂದು ಶಪಿಸಿದನು.

ಆಮೇಲೆ ಎಚ್ಚೆತ್ತ ನಿಮಿ ವಸಿಷ್ಠನ ಶಾಪವನ್ನು ತಿಳಿದು. "ನಿದ್ದೆಯಲ್ಲಿದ್ದ ನನ್ನನ್ನು ಶಪಿಸಿದ ನಿಮ್ಮ ಶರೀರ ಕೂಡಾ ಚೇತನವಿಲ್ಲದೆ ಹೋಗಲಿ!" ಎಂದು ಪ್ರತಿಶಾಪ ಕೊಟ್ಟನು.

ಹೀಗೆ ಒಬ್ಬರನ್ನೊಬ್ಬರು ಶಪಿಸಿಕೊಂಡ ನಿಮಿ ವಸಿಷ್ಠರು "ವಿದೇಹ" ಸ್ಥಿತಿಯನ್ನು ಹೊಂದಿದರು.

ಆಗ ವಸಿಷ್ಠನು ತನ್ನ ತಂದೆಯಾದ ಬ್ರಹ್ಮನ ಬಳಿಗೆ ವಾಯುರೂಪ ಧರಿಸಿ ಹೋಗಿ, "ನಿಮಿಯ ಶಾಪದಿಂದ ನನ್ನ ದೇಹವು ಹೋಗಿಬಿಟ್ಟಿದೆ. ದೇಹ ವಿಲ್ಲದುದರಿಂದ ಬಹಳ ಬಾಧೆಯಾಗಿದೆ. ಯಾವ ಕೆಲಸವನ್ನೂ ಮಾಡಲಾಗುವುದಿಲ್ಲ. ಆದುದರಿಂದ ನನ್ನನ್ನು ಅನುಗ್ರಹಿಸಿ ನನಗೆ ಮತ್ತೊಂದು ಶರೀರ ಬರುವಂತೆ ಮಾಡು ತಂದೇ" ಎಂದು ಮೊರೆಯಿಟ್ಟು ಬೇಡಿಕೊಂಡನು.

ಬ್ರಹ್ಮನು ವಸಿಷ್ಠನಿಗೆ, ಮಿತ್ರಾವರುಣರ ತೇಜಸ್ಸಿನಿಂದ ಮತ್ತೆ ಶರೀರವನ್ನು ಸಂಪಾದಿಸಿಕೊಳ್ಳಲು ಹೇಳಿದನು. ಆ ವಿಧವಾಗಿ ಮತ್ತೊಂದು ಶರೀರವನ್ನು ಸಂಪಾದಿಸಿಕೊಂಡ ವಸಿಷ್ಠನೇ ಇಕ್ಷ್ವಾಕು ವಂಶದವರಿಗೆ ಪುರೋಹಿತನಾದನು.

ನಿಮಿಯ ಸಂಗತಿ ಏನಾಯಿತೆಂದರೆ, ನಿಮಿಯ ಅಚೇತನ ಶರೀರವನ್ನು ಮುನಿಗಳು ರಕ್ಷಿಸಿ, ದೇಹ ವಿಲ್ಲದ ನಿಮಿ ಸಮಸ್ತ ಪ್ರಾಣಿಗಳ ಕಣ್ಣಿನಲ್ಲಿಯೂ ಇರುವ ಹಾಗೆ ವರವನ್ನು ಕೊಟ್ಟರು. ಆಮೇಲೆ ಅವರು ನಿಮಿಯ ಶರೀರವನ್ನು ಮಥಿಸಿದರು. ಆಗ ಅದರಿಂದ ಒಬ್ಬ ಹುಡುಗನು ಹುಟ್ಟಿ ಮಿಥಿ ಎಂಬ ಹೆಸರಿನಿಂದ ಕರೆಯಲ್ಪಟ್ಟನು. ಅವನ ಹೆಸರಿನಲ್ಲೇ ಮಿಥಿಲಾ ನಗರ ಏರ್ಪಟ್ಟಿತು. ಅವನಿಗೆ ಜನಕನೆಂತಲೂ ಹೆಸರಿದೆ.




ರಾಮನು ಹೇಳಿದ ಆ ಕಥೆಗಳನ್ನು ಕೇಳಿ ಲಕ್ಷ್ಮಣನು, "ಅಣ್ಣಾ, ನಿಮಿ ಕ್ಷತ್ರಿಯನಾಗಿದ್ದು ಕೂಡಾ ವಸಿಷ್ಠರಂತಹ ಮಹಾತ್ಮರಿಂದ ಏಕೆ ಶಾಂತಿ ಹೊಂದಲಿಲ್ಲ ?" ಎಂದು ಕೇಳಿದನು.

"ತಮ್ಮಾ, ರೋಷ ಬಂದುಬಿಟ್ಟರೆ ಎಂತಹ ಮಹಾತ್ಮನಾದರೂ ಶಾಂತಿಯನ್ನು ಕಳೆದುಕೊಳ್ಳುವುದು ಸಹಜ. ಹಾಗೆ ರೋಷವನ್ನು ನಿಗ್ರಹಿಸಿಕೊಳ್ಳುವವನು ಒಬ್ಬ ಯಯಾತಿಗೇ ಸಾಧ್ಯ" ಎಂದು ರಾಮನು, ನಿದ್ದೆ ಬರುವ ಲಕ್ಷಣ ಕಾಣದೆ ಲಕ್ಷ್ಮಣನಿಗೆ ಯಯಾತಿಯ ವೃತ್ತಾಂತವನ್ನು ಹೇಳತೊಡಗಿದನು :

ನಹುಷನ ಮಗನು ಯಯಾತಿ. ಅವನಿಗೆ ಇಬ್ಬರು ಪತ್ನಿಯರು. ಒಬ್ಬಳು ವೃಷಪರ್ವ ರಾಜನ ಕುಮಾರಿಯಾದ ಶರ್ಮಿಷ್ಠೆ. ಎರಡನೆಯವಳು ಶುಕ್ರಾಚಾರ್ಯನ ಕುಮಾರಿಯಾದ ದೇವಯಾನಿ. ಆದರೆ ಯಯಾತಿಗೆ ಶರ್ಮಿಷ್ಠೆಯ ಮೇಲೆ ಇರುವಷ್ಟು ಪ್ರೇಮ ದೇವಯಾನಿಯ ಮೇಲೆ ಇರಲಿಲ್ಲ. ಹಾಗೆಯೇ ಅವನಿಗೆ ಶರ್ಮಿಷ್ಠೆಯ ಮಗನಾದ ಪೂರುವಿನ ಮೇಲೆ ಇರುವಷ್ಟು ಮಮಕಾರವು ದೇವಯಾನಿಯ ಮಗನಾದ ಯದುವಿನ ಮೇಲೆ ಇರಲಿಲ್ಲ. ನಿಜವಾಗಿಯೂ ಪೂರು ಕುಮಾರ ಒಳ್ಳೆಯ ಗುಣಗಳುಳ್ಳವನು. ಸುಗುಣಗಳ ಖನಿಯಾದ ಶರ್ಮಿಷ್ಠೆಗೆ ತಕ್ಕ ಮಗನಾಗಿಯೇ ಅವನಿದ್ದನು.

ತನ್ನ ತಂದೆ ಪೂರುವಿನ ಮೇಲೆ ಹೆಚ್ಚು ಪ್ರೇಮ ತೋರಿಸುವುದನ್ನು ಸಹಿಸಲಾಗದೆ ಯದು ತನ್ನ ತಾಯಿಯಾದ ದೇವಯಾನಿಯೊಂದಿಗೆ "ಅಮ್ಮಾ, ಶುಕ್ರಾಚಾರ್ಯರಂತಹವರ ಕುಮಾರಿಯಾಗಿರುವ ನೀನೂ ನಿನ್ನ ಕುಮಾರನಾದ ನಾನೂ ಇಷ್ಟೊಂದು ಅವಮಾನವನ್ನು ಏತಕ್ಕಾಗಿ ಸಹಿಸಿಕೊಂಡಿರಬೇಕು? ನಾವಿಬ್ಬರೂ ಅಗ್ನಿಗೆ ಹಾರಿ ಪ್ರಾಣತ್ಯಾಗ ಮಾಡಿಕೊಳ್ಳೋಣ, ಈ ಅವಮಾನವನ್ನು ಒಂದು ವೇಳೆ ನೀನು ಸಹಿಸುವಿಯಾದರೂ ನನಗೆ ಸಹಿಸಲಿಕ್ಕೆ ಸಾಧ್ಯವಿಲ್ಲ. ಸಾಕಾಗಿ ಹೋಯಿತು. ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ನನಗೆ ಅಪ್ಪಣೆ ಕೊಡು" ಎಂದು ಪಟ್ಟುಹಿಡಿದು ಅಳತೊಡಗಿದನು.

ಮಗನ ದುಃಖವನ್ನು ನೋಡಿ ದೇವಯಾನಿಗೆ ರೋಷವೆದ್ದಿತು. ಅವಳು ಕೂಡಲೇ ತನ್ನ ತಂದೆಯನ್ನು ನೆನೆದುಕೊಂಡಳು. ಮರು ನಿಮಿಷದಲ್ಲಿ ಶುಕ್ರಾಚಾರ್ಯನು ಅವಳ ಬಳಿಗೆ ಹೊರಟುಬಂದನು.

"ಅಪ್ಪಾ, ನನ್ನ ಗಂಡ ನನ್ನನ್ನು ಅತ್ಯಂತ ಹೀನವಾಗಿ ನೋಡುತ್ತಾನೆ. ಈ ಅವಮಾನವನ್ನು ಸಹಿಸಿಕೊಂಡಿರಲು ಸಾಧ್ಯವಿಲ್ಲದಾಗಿದೆ. ನನಗೆ ಬೆಂಕಿಗೆ ಹಾರಿಯೋ, ವಿಷ ಕುಡಿದೋ, ನೀರಿನಲ್ಲಿ ಹಾರಿಯೋ ಸಾಯಬೇಕೆಂದು ಕಾಣುತ್ತದೆ. ನಿಮ್ಮನ್ನು ಕೇಳಿ ಆ ಕೆಲಸ ಮಾಡಬೇಕೆಂದಿದ್ದೇನೆ" ಎಂದು ದೇವಯಾನಿ ಕಣ್ಣೀರು ಸುರಿಸುತ್ತಾ ತಂದೆಯೊಂದಿಗೆ ಹೇಳಿದಳು.

ಮಗಳ ಅವಸ್ಥೆಯನ್ನು ಕೇಳಿ ಶುಕ್ರಾಚಾರ್ಯನಿಗೆ ಹಿಡಿಸಲಾಗದಷ್ಟು ಕೋಪ ಬಂತು. ಆದರಿಂದ ಅವನು ಹಿಂದು ಮುಂದು ನೋಡದೆ ಯಯಾತಿಯನ್ನು ವೃದ್ಧನಾಗಿಯೇ ಬದುಕಿಕೊಂಡಿರುವಂತೆ ಶಪಿಸಿ, ತನ್ನ ವಾಸಸ್ಥಳಕ್ಕೆ ಹಿಂದಿರುಗಿ ಹೋಗಿಬಿಟ್ಟನು. ಶುಕ್ರಾಚಾರ್ಯನ ಶಾಪವನ್ನು ಯಯಾತಿ ಅತ್ಯಂತ ಸಹನೆಯಿಂದ ಸ್ವೀಕರಿಸಿಕೊಂಡನು. ಆದರೆ ಯೌವನದ ಬಯಕೆ ತೀರಿರಲಿಲ್ಲ.

ಅವನು ಮಗನಾದ ಯದುವನ್ನು ಕರೆದು, "ಮಗನೇ, ನನಗೆ ಇನ್ನೂ ತುಂಬಾ ಭೋಗಭಾಗ್ಯಗಳನ್ನು ಅನುಭವಿಸಬೇಕೆಂಬ ಆಶೆಯಾಗಿದೆ. ನನಗೆ ಇನ್ನೂ ಸುಖಭೋಗಗಳ ಮೇಲೆ ತೃಪ್ತಿಯಾಗಲಿಲ್ಲ; ಆದುದರಿಂದ ನಿನ್ನ ಯೌವನವನ್ನು ನನಗೆ ಕೊಟ್ಟು ನನ್ನ ವೃದ್ಧಾಪ್ಯವನ್ನು ಸ್ವಲ್ಪ ಕಾಲದವರೆಗೆ ನೀನು ಸ್ವೀಕರಿಸುವೆಯಾ ? ನನಗೆ ಭೋಗಗಳ ಮೇಲೆ ತೃಪ್ತಿಯಾದ ನಂತರ ನಿನ್ನ ಯೌವನವನ್ನು ನಿನಗೆ ಕೊಟ್ಟು ಮುದುಕತನವನ್ನು ತೆಗೆದುಕೊಳ್ಳುತ್ತೇನೆ" ಎಂದನು.

"ಏನು ಮಾತಿದು ? ನಿನ್ನ ಸರಿಸಮದಲ್ಲಿ ಕುಳಿತು ಭೋಜನ ಮಾಡುವ ಅರ್ಹತೆಯುವನಾಗಿ ನಿನ್ನ ಪ್ರೀತಿಯ ಮಗ ಪೂರು ಇರುವಾಗ ನಿನ್ನ ಮುದುಕತನವನ್ನು ನಾನೇಕೆ ತೆಗೆದುಕೊಳ್ಳಬೇಕು ? ಬೇಕಾದರೆ ಅವನನ್ನೇ ತೆಗೆದುಕೊಳ್ಳಲಿಕ್ಕೆ ಹೇಳು" ಎಂದನು ಯದು ನಿರ್ದಾಕ್ಷಿಣ್ಯದಿಂದ.

ಆಗ ಯಯಾತಿ ಪೂರುವನ್ನು ಕರೆದು ಯದುವನ್ನು ಕೇಳಿದಂತೆಯೇ ಕೇಳಿದನು. ತನ್ನ ತಂದೆಯ ವಾರ್ಧಕ್ಯವನ್ನು ತಾನು ತೆಗೆದುಕೊಳ್ಳಲು ಪೂರು ಮನಃಪೂರ್ವಕವಾಗಿ ಒಪ್ಪಿಕೊಂಡನು. ಯಯಾತಿ ತನ್ನ ವೃದ್ಧಾಪ್ಯವನ್ನು ಪೂರುವಿಗೆ ಕೊಟ್ಟು, ಅವನ ಯೌವನವನ್ನು ತಾನು ಪಡೆದು ಅನೇಕ ಸಾವಿರ ಯಜ್ಞಗಳನ್ನು ಮಾಡಿದನು. ಅನೇಕ ಸಾವಿರ ವರ್ಷಗಳವರೆಗೆ ರಾಜ್ಯಪಾಲನೆಯನ್ನು ಸಾಗಿಸಿದನು. ಕಡೆಗೆ ಅವನು ತೃಪ್ತನಾಗಿ, ತನ್ನ ಮಗನಿಂದ ತನ್ನ ಮುದುಕತನವನ್ನು ಹಿಂದೆ ಪಡೆದುಕೊಂಡು, ಅವನಿಗೆ ರಾಜ್ಯಾಭಿಷೇಕ ಮಾಡಿದನು. ದೇವಯಾನಿಯ ಮಗನಾದ ಯದುವಿಗೆ ರಾಜ್ಯಾರ್ಹತೆ ಇಲ್ಲದೆ ಹೋಯಿತು.

ಯಯಾತಿಯ ಅನಂತರ ಪೂರು ಪ್ರತಿಷ್ಠಾನಪುರವನ್ನು ರಾಜಧಾನಿಯಾಗಿ ಮಾಡಿಕೊಂಡು ಬಹಳ ಕಾಲ ರಾಜ್ಯಭಾರ ಮಾಡಿದನು.

ರಾಮಲಕ್ಷ್ಮಣರು ಹೀಗೆ ಕಥೆಗಳನ್ನು ಹೇಳಿಕೊಂಡಿರುವಾಗಲೇ ರಾತ್ರಿ ಕಳೆದುಹೋಯಿತು. ಮೂಡುದಿಕ್ಕಿನಲ್ಲಿ ಅರುಣ ರೇಖೆಗಳು ಕಾಣತೊಡಗಿದುವು.






ಮರುದಿನ ರಾಮನು ಸಭಾಸ್ಥಾನದಲ್ಲಿ ಒಡ್ಡೋಲಗ ನಡೆಯಿಸಿಕೊಂಡಿರುವಾಗ, ಒಂದು ನಾಯಿ ಬಂದು ಸಭಾಸ್ಥಾನದ ಬಾಗಿಲ ಹೊರಗೆ ನಿಂತು ಒಳಗೆ ಹೋಗಲು ಅನುಮತಿ ಕೇಳುವಂತೆ ತಲೆಯಾಡಿಸುತ್ತ ಬೊಗಳತೊಡಗಿತು. ಆ ಬೊಗಳಿಕೆಯಿಂದ ಅದು ರಾಜನೊಂದಿಗೆ ಏನೋ ದೂರು ತಂದಿರುವಂತೆ ಲಕ್ಷ್ಮಣನಿಗೆ ತಿಳಿಯಿತು. ಅದನ್ನು ಮೆಲ್ಲನೆ ಸಭೆಯೊಳಗೆ ಕರೆದು ತಂದನು.

ತಲೆಯಲ್ಲಿ ದೊಡ್ಡದೊಂದು ಗಾಯವಾಗಿರುವ ಆ ನಾಯಿಯನ್ನು ನೋಡಿ ರಾಮನು, "ನಿನಗೆ ಬಂದ ಕಷ್ಟವೇನೆಂಬುದನ್ನು ನನ್ನ ಮುಂದೆ ನಿರ್ಭಯವಾಗಿ ಹೇಳು. ಯಾರಿಂದ ಏನಾಯಿತು ನಿನಗೆ ?" ಎಂದನು.

"ಪ್ರಭೂ ! ಸರ್ವಾರ್ಥಸಿದ್ಧಿ ಎಂಬ ಭಿಕ್ಷು ನನ್ನ ತಲೆಯನ್ನು ಬಡಿಗೆಯಿಂದ ಒಡೆದುಬಿಟ್ಟನು. ನಾನು ಅವನಿಗೆ ಯಾವ ಕೆಡುಕನ್ನೂ ಮಾಡಲಿಲ್ಲ" ಎಂದಿತು ನಾಯಿ.

ರಾಮನು ಕೂಡಲೇ ನಾಯಿಗೆ ಔಷಧೋಪಚಾರ ಮಾಡಲು ಹೇಳಿ ಆ ಭಿಕ್ಷುವನ್ನು ಕರೆಯಿಸಿ, "ನೀನು ಈ ನಾಯಿಯ ತಲೆಯನ್ನು ಏತಕ್ಕಾಗಿ ಒಡೆದೆ ?" ಎಂದು ಕೇಳಿದನು.

"ಮಹಾರಾಜಾ, ನಾನು ಭಿಕ್ಷೆಗಾಗಿ ಮನೆ ಮನೆ ತಿರುಗಿಕೊಂಡಿರುವವನು. ನನಗೆ ಎಲ್ಲಿಯೂ ಭಿಕ್ಷೆ ಸಿಗಲಿಲ್ಲ. ನಾನು ಬಹಳ ಬೇಸರದಿಂದ ನಡೆಯುತ್ತಿದ್ದಾಗ ಈ ನಾಯಿ ನನ್ನ ದಾರಿಗೆ ಅಡ್ಡ ನಿಂತುಕೊಂಡು ಎಷ್ಟು ಹೇಳಿದರೂ ಕದಲದೇ ಇರುವುದನ್ನು ನೋಡಿ, ಕೋಪ ಉಕ್ಕಿ ಅದರ ತಲೆಯ ಮೇಲೆ ಬಡಿಗೆಯಿಂದ ಹೊಡೆದು ಬಿಟ್ಟೆನು. ಹಸಿವೆಯಿಂದ ಬಿದ್ದಿದ್ದ ನಾಯಿಯನ್ನು ಹೊಡೆದ ತಪ್ಪಿಗೆ ನನಗೆ ಏನು ದಂಡನೆ ಕೊಡುವಿರೋ ಕೊಡಿರಿ" ಎಂದನು ಸರ್ವಾರ್ಥಸಿದ್ಧಿ.

ಅವನಿಗೆ ಏನು ಶಿಕ್ಷೆ ಕೊಟ್ಟರೆ ಸರಿಯಾಗುವುದೆಂದು ರಾಮನು ಸಭೆಯಲ್ಲಿರುವವರನ್ನು ನೋಡಿ ಕೇಳಿದನು. ಸಭೆಯಲ್ಲಿ ದೊಡ್ಡ ದೊಡ್ಡ ಮೇಧಾವಿ



ಗಳೂ ಪಂಡಿತರೂ ಇದ್ದರೇನೋ ನಿಜ. ಆದರೆ ಒಬ್ಬರೂ ಸರಿಯಾದ ದಂಡನೆಯನ್ನು ಹೇಳಲಾಗದೆ ಸುಮ್ಮನಿದ್ದರು. ಏಕೆಂದರೆ ವಾದಿ ಪ್ರತಿವಾದಿಗಳಿಬ್ಬರೂ ಹಸಿವೆಯ ಸಂಕಟದಲ್ಲಿದ್ದು ಆ ತಪ್ಪು ಮಾಡಿದ್ದರು. ಆದರೆ ಭಿಕ್ಷು ಮನುಷ್ಯನಾದುದರಿಂದ ಮೂಕಪ್ರಾಣಿಯನ್ನು ಹೊಡೆಯಬಾರದಿತ್ತು.

ಎಲ್ಲರೂ ಸುಮ್ಮನಿರುವುದನ್ನು ನೋಡಿ ಪೆಟ್ಟು ತಿಂದ ನಾಯಿ ರಾಮನೊಂದಿಗೆ "ರಾಮಪ್ರಭೂ; ಅವನಿಗೆ ನಾನು ಹೇಳಿದ ಶಿಕ್ಷೆಯನ್ನೇ ಕೊಟ್ಟು ಬಿಡಿರಿ. ಕಾಲಂಚರವೆಂಬ ಸ್ಥಳದಲ್ಲಿ ಕುಲಪತಿಯಾಗಿರುವ ಉದ್ಯೋಗವನ್ನು ಇವನಿಗೆ ಕೊಟ್ಟು ಬಿಡಿರಿ" ಎಂದು ಹೇಳಿತು.

ರಾಮನು ನಾಯಿಯ ಅಪೇಕ್ಷೆಯಂತೆ ಆ ಭಿಕ್ಷುವಿಗೆ ಅದೇ ಉದ್ಯೋಗವನ್ನು ಕೊಟ್ಟನು. ಕೂಡಲೇ ಅವನನ್ನು ಒಳ್ಳೆಯ ಉಡುಗೆ ತೊಡುಗೆಗಳಿಂದ ಅಲಂಕರಿಸಿ, ಆನೆಯ ಮೇಲೆ ಏರಿಸಿ ಉದ್ಯೋಗಕ್ಕೆ ಕಳುಹಿಸಿದನು. ಭಿಕ್ಷು ಬಹಳ ಸಂತೋಷದಿಂದ ಉಬ್ಬಿಕೊಳ್ಳುತ್ತ, ಕಾಲಂಚರ ಕುಲಪತಿಯ ಉದ್ಯೋಗಕ್ಕೆ ಹೋದನು.

ಆಮೇಲೆ ರಾಮನೂ, ಮಂತ್ರಿಗಳೂ ಆ ನಾಯಿಯನ್ನು ನೋಡಿ. "ನಿನ್ನನ್ನು ಹೊಡೆದ ಆ ಭಿಕ್ಷುವಿಗೆ ಬಹಳ ಸಂತೋಷವಾಗುವಂತೆ ಇಂತಹ ಯಜಮಾನಿಕೆ ನಡೆಸುವ ಪದವಿಯನ್ನು ಶಿಕ್ಷೆಯಾಗಿ ಕೊಡಿಸಲು ಏನೋ ಕಾರಣವಿರಬೇಕು. ಅದೇನೆಂದು ಹೇಳು" ಎಂದರು.

"ನಾನು ಕಳೆದ ಜನ್ಮದಲ್ಲಿ ಆ ಉದ್ಯೋಗದಲ್ಲೇ ಇದ್ದೆನು. ಆ ಪದವಿಯಲ್ಲಿ ನನಗೆ ಒಳ್ಳೆಯ ಭೋಜನವೂ, ದಾಸದಾಸಿಯರೂ ಹೀಗೆ ಬೇಕಾದ ಎಲ್ಲಾ ಸುಖಭೋಗಗಳೂ ದೊರೆತುವು. ಬಹಳ ಭೂತದಯವುಳ್ಳವನೆಂದೂ, ಒಳ್ಳೆಯ ವಿನಯಶೀಲನೆಂದೂ ಎಲ್ಲರಿಂದಲೂ ಹೇಳಿಸಿಕೊಂಡೆನು. ದೇವ ಬ್ರಾಹ್ಮಣರ ಸೇವೆ ಮಾಡಿ ಪೂಜಿಸಿದೆನು. ಬಹಿರಂಗದಲ್ಲಿ ನನಗೆ ಒಳ್ಳೆಯ ಹೆಸರಿದ್ದರೂ, ಅಂತರಂಗದಲ್ಲಿ ಸ್ವಾರ್ಥಿಯಾಗಿದ್ದೆನು. ಆ ಪದವಿಯಲ್ಲಿದ್ದ ಕಾರಣದಿಂದ ನನಗೆ ಈ ನೀಚ ಜನ್ಮವು ಸಿಕ್ಕಿತು. ಮಹಾ ಕೋಪಿಯಾದ, ದಯಾದಾಕ್ಷಿಣ್ಯರಹಿತನಾದ ಈ ಭಿಕ್ಷು ಆ ಪದವಿಯನ್ನು ನಿರ್ವಹಿಸಿಕೊಂಡಿದ್ದರೆ ಜನ್ಮಜನ್ಮಕ್ಕೂ ಘೋರ ನರಕವನ್ನೇ ಅನುಭವಿಸಿಕೊಂಡಿರುತ್ತಾನೆ" ಎಂದಿತು ನಾಯಿ.

ಆಮೇಲೆ ನಾಯಿ ಸಭೆಯಿಂದ ಹೊರಟು ಹೋಯಿತು.

ಮತ್ತೆ ಕೆಲವು ದಿನಗಳ ಮೇಲೆ ಒಂದು ಗೂಗೆಯೂ, ಒಂದು ಹದ್ದೂ ತಮ್ಮೊಳಗೆ ಏನೋ ತಗಾದೆ ಮಾಡಿಕೊಂಡು ತೀರ್ಪು ಕೇಳಲಿಕ್ಕಾಗಿ ರಾಮನ ಬಳಿಗೆ ಬಂದವು. ತಗಾದೆಯ ಕಾರಣವಿಷ್ಟೇ. ಒಂದು ವನದಲ್ಲಿದ್ದ ಒಂದು ಮನೆ, ನನ್ನದು ನನ್ನದೆಂದು ಅವುಗಳೊಳಗೆ ವಿವಾದವೆದ್ದುದೇ.

ಅವುಗಳ ತಗಾದೆಯನ್ನು ತೀರಿಸಲಿಕ್ಕಾಗಿ ರಾಮನು ಮಂತ್ರಿಗಳೊಂದಿಗೆ ಸ್ವತಃ ವಿವಾದದ ಕಾರಣ ತಿಳಿಯಲು ಪುಷ್ಪಕ ವಿಮಾನದಲ್ಲೇರಿ ವನದಲ್ಲಿರುವ ಆ ಮನೆಯ ಸ್ಥಳಕ್ಕೆ ಹೋದನು.

"ಈ ಮನೆಯನ್ನು ನೀನು ಯಾವಾಗ ಕಟ್ಟಿಕೊಂಡೆ ? ಆಗ ಇಲ್ಲಿ ಏನಿತ್ತು ? " ಎಂದು ರಾಮನು ಹದ್ದನ್ನು ಕೇಳಿದನು.

"ಭೂಮಿಯಲ್ಲಿ ಮನುಷ್ಯರು ಹುಟ್ಟಿದ ಕಾಲದಿಂದ ನಾನು ಈ ಮನೆಯನ್ನು ಕಟ್ಟಿಕೊಂಡಿದ್ದೇನೆ. ಆದ್ದರಿಂದ ಇದು ನನ್ನದೇ ಸ್ವಂತ ಮನೆಯಾಗಿದೆ" ಎಂದಿತು ಹದ್ದು.

ಕೂಡಲೇ ಗೂಗೆ, "ರಾಮಪ್ರಭೂ ! ಭೂಮಿಯ ಮೇಲೆ ಮರಗಿಡಗಳು ಏರ್ಪಡುವ ಕಾಲದಲ್ಲಿ ನಾನು ಈ ಮನೆಯನ್ನು ಕಟ್ಟಿಕೊಂಡಿದ್ದೇನೆ. ನನ್ನ ಮನೆಯಿದು, ಅದಕ್ಕೆ ನನಗಾಗಿರುವ ವಯಸ್ಸೇ ಸಾಕ್ಷಿ. ಹದ್ದು ಮತ್ತೆ ಬಂದವನೇ. ನಾನು ಆಹಾರ ತರಲು ಹೋದಾಗ ನನ್ನ ಮನೆಯೊಳಗೆ ನುಗ್ಗಿದ್ದಾನೆ" ಎಂದಿತು.

ರಾಮನೊಂದಿಗಿದ್ದ ಮಂತ್ರಿಗಳು, ಅದು ಗೂಗೆಯದೇ ಮನೆ ಎಂದರು, ಏಕೆಂದರೆ ಸೃಷ್ಟಿಯಲ್ಲಿ ಮೊದಲು ಹುಟ್ಟಿದುವು ವೃಕ್ಷ ಜಾತಿಗಳೇ. ಮುದಿಯಾದ ಗೂಗೆಯ ಮನೆಯನ್ನು ಅಪಹರಿಸಲು ನೋಡುವ ಹದ್ದನ್ನು ಶಿಕ್ಷಿಸಬೇಕೆಂದು ರಾಮನು ನಿರ್ಧರಿಸಲು, ಆಗ ಆಕಾಶವಾಣಿಯೊಂದು ಹೀಗೆ ಮೊಳಗಿತು :

"ರಾಮಾ ! ಮೊದಲೇ ಶಾಪ ಪಡೆದಿರುವ ಈ ಹದ್ದನ್ನು ಇನ್ನೂ ಏಕೆ ಶಿಕ್ಷಿಸುವಿ? ಈ ಹದ್ದು ಬ್ರಹ್ಮದತ್ತನೆಂಬ ರಾಜ. ಆವನು ಮಹಾ ಧನಿಕನಾಗಿ, ಶೂರನಾಗಿ, ಸತ್ಯಸಂಧನಾಗಿ ಇದ್ದವನು. ಒಂದು ದಿನ ಇವನ ಮನೆಗೆ ಗೌತಮನು ಬಂದು ಅತಿಥಿಯಾಗಿದ್ದನು. ಬ್ರಹ್ಮದತ್ತ ರಾಜನು ಗೌತಮನಿಗೆ ಸ್ವಯಂ ಆರ್ಘ್ಯಪಾದ್ಯಗಳನ್ನಿತ್ತು ಉಪಚರಿಸಿದನು. ಹೀಗೆ ಅಲ್ಲಿ ಬ್ರಹ್ಮದತ್ತನ ಆತಿಥ್ಯವನ್ನು ಗೌತಮನು ಸ್ವೀಕರಿಸಿಕೊಂಡಿದ್ದಾಗ ಒಂದು ದಿನ ಭೋಜನದಲ್ಲಿ ಗೊತ್ತಾಗದಂತೆ ಮಾಂಸದ ಚೂರೊಂದು ಬಂದಿತು. ಅದನ್ನು ನೋಡಿ ಗೌತಮನು ಕೋಪಗೊಂಡು ರಾಜನನ್ನು ಹದ್ದಾಗುವಂತೆ ಶಪಿಸಿಬಿಟ್ಟನು. ಆಮೇಲೆ ಬ್ರಹ್ಮದತ್ತನು ಬೇಡಿಕೊಂಡಿದ್ದರಿಂದ ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ರಾಮನ ಸ್ಪರ್ಶದಿಂದ ಆವನಿಗೆ ಶಾಪ ವಿಮುಕ್ತಿಯಾಗುವುದೆಂದು ಗೌತಮನು ಮನಸ್ಸು ಕರಗಿ ವರವನ್ನೂ ಕೊಟ್ಟನು."



ಆಕಾಶವಾಣಿಯನ್ನು ಕೇಳಿ ರಾಮನು ಆ ಹದ್ದನ್ನು ಸ್ಪರ್ಶಿಸಿದನು. ಕೂಡಲೇ ಹದ್ದು ದಿವ್ಯ ಪುರುಷನಾಗಿ ಮಾರ್ಪಟ್ಟಿತು. ಬಹ್ಮದತ್ತ ರಾಜನಾದ ಆ ಪುರುಷನು ರಾಮನಿಗೆ ಕೃತಜ್ಞತೆಯ ನಮಸ್ಕಾರ ಮಾಡಿ ಹೊರಟು ಹೋದನು.




ಮುಂದೆ ಮತ್ತೊಂದು ದಿನ ಯಮುನಾ ತೀರ ವಾಸಿಗಳಾದ ಮುನಿಗಳು ಕೆಲವರು ರಾಮನ ದರ್ಶನಾರ್ಥವಾಗಿ ಬಂದರು. ಅವರು ತಂದುಕೊಟ್ಟ ನೀರು ಮತ್ತು ಹಣ್ಣು ಹಂಪಲ ಮೊದಲಾದುವನ್ನು ರಾಮನು ಸ್ವೀಕರಿಸಿ, ಅವರೆಲ್ಲರನ್ನೂ ಸುಖಾಸನದಲ್ಲಿ ಕುಳ್ಳಿರಿಸಿ, ಆಮೇಲೆ ಅವರು ಬಂದ ಕಾರ್ಯವೇನೆಂದು ಕೇಳಿದನು.

ಲವಣಾಸುರನೆಂಬ ರಾಕ್ಷಸನು ರುದ್ರವರ ಪ್ರಸಾದದ ಗರ್ವದಲ್ಲಿ ತಮ್ಮನ್ನು ನಾನಾ ರೀತಿಯಲ್ಲಿ ಬಾಧಿಸುತ್ತಿರುವನೆಂದೂ, ಅವನ ಕಾಟದಿಂದ ತಮ್ಮನ್ನು ಕಾಪಾಡಬೇಕೆಂದೂ ಆ ಮುನಿಗಳು ರಾಮನನ್ನು ಕೇಳಿಕೊಂಡರು.

ಲವಣನೆಂಬ ಆ ರಾಕ್ಷಸನು ಮಧುವೆಂಬ ರಾಕ್ಷಸನ ಮಗ. ಮಧು ರುದ್ರನನ್ನು ಧ್ಯಾನಿಸಿ ಬಹು ದೀರ್ಘ ಕಾಲ ತಪಸ್ಸು ಮಾಡಿ ಮೆಚ್ಚಿಸಿದವನು. ಅದರ ಫಲವಾಗಿ ರುದ್ರನು ತನ್ನ ತ್ರಿಶೂಲದಿಂದ ಇನ್ನೊಂದು ತ್ರಿಶೂಲವನ್ನು ಹುಟ್ಟಿಸಿ ಮಧುವಿಗೆ ಕೊಟ್ಟು, "ಇದು ನಿನ್ನೊಂದಿಗಿರುವಷ್ಟು ಕಾಲ ನಿನ್ನನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲ" ಎಂದು ವರ ವಚನ ಹೇಳಿದ್ದನು.

ಮಧು ಅಷ್ಟಕ್ಕೆ ಬಿಡದೆ ಆ ತ್ರಿಶೂಲವು ವಂಶ ಪರಂಪರೆಯಾಗಿ ತನ್ನ ಮನೆಯಲ್ಲಿರಬೇಕೆಂದು ಕೂಡಾ ಶಿವನನ್ನು ಬೇಡಿಕೊಂಡನು ಮಧು.

ಅದಕ್ಕೆ ಶಿವನು "ನಿನ್ನ ಅನಂತರ ಈ ತ್ರಿಶೂಲವು ನಿನ್ನ ಮಗನಿಗೆ ಮಾತ್ರವೇ ನಿನಗೆ ಆದಂತೆ ಉಪಯೋಗವಾಗಿರುತ್ತದೆ. ಆಮೇಲೆ ಇರಲಾರದು" ಎಂದಿದ್ದನು.

ಅಂತಹ ಮಧು ರಾವಣನ ತಂಗಿಯಾದ ಕುಂಭೀನಸಳನ್ನು ಮದುವೆ ಮಾಡಿಕೊಂಡನು. ಅವರಿಗೆ ಮಗನಾಗಿ ಹುಟ್ಟಿದವನು ಲವಣ. ಈ ಲವಣನು ಚಿಕ್ಕತನದಿಂದಲೂ ಮಹಾ ಪಾಪಿಯೇ. ಅವನನ್ನು ಒಳ್ಳೆಯವನಾಗುವಂತೆ ಮಾಡಲು ಮಧುವಿನಿಂದ ಸಾಧ್ಯವಾಗಲಿಲ್ಲ. ಮಧು ವರುಣ ಲೋಕಕ್ಕೆ ಹೊರಟು ಹೋಗುವಾಗ ಶಿವನಿಂದ ಪಡೆದ ತ್ರಿಶೂಲವನ್ನು ಲವಣನಿಗೆ ಕೊಟ್ಟಿದ್ದನು. ಅದರ ಅದ್ಭುತ ಶಕ್ತಿಯನ್ನು ತಿಳಿದುಕೊಂಡಿದ್ದ ಲವಣನು ವಿಪರೀತವಾಗಿ ವಿಜೃಂಭಿಸಿ ಮುನಿ ಜನರನ್ನು ಕಾಡಿಕೊಂಡಿದ್ದನು. ಮಧುವಿನಲ್ಲಿಲ್ಲದ ಕ್ರೂರತನಗಳೆಲ್ಲಾ ಲವಣಾಸುರನಲ್ಲಿದ್ದುವು.

ಮುನಿಗಳು ಹೇಳಿದ ಈ ಎಲ್ಲಾ ವಿವರಗಳನ್ನೂ ಕೇಳಿದ ಮೇಲೆ ರಾಮನು ಅವರನ್ನು ನೋಡಿ, "ಇನ್ನು ಹೆದರಬೇಡಿರಿ. ಬಹು ಬೇಗದಲ್ಲೇ ಲವಣಾಸುರನನ್ನು ನಾನು ಸಂಹರಿಸುತ್ತೇನೆ" ಎಂದು ಅವರಿಗೆ ಅಭಯವಿತ್ತನು.

ಆಮೇಲೆ ರಾಮನು ತನ್ನ ತಮ್ಮಂದಿರನ್ನು ನೋಡಿ, "ಲವಣಾಸುರನನ್ನು ಕೊಲ್ಲುವ ಕೆಲಸವನ್ನು ಯಾರು ಮಾಡುವಿರಿ?" ಎಂದು ಕೇಳಿದನು.

ತಾನು ಆ ಕೆಲಸ ಮಾಡುವೆನೆಂದು ಭರತನು ಎದ್ದನು. ಆಗ ಶತ್ರುಘ್ನನು ಭರತನ ಮೇಲೆ ಸ್ಪರ್ಧೆಗೆ ಎದ್ದವನಂತೆ, "ನಾನೇ ಲವಣಾಸುರನನ್ನು ಕೊಲ್ಲುತ್ತೇನೆ. ನಾನಿರುವಾಗ ಭರತನು ಆ ಕೆಲಸಕ್ಕೆ ಹೋಗುವುದು ಚೆನ್ನಾಗಿಲ್ಲ. ಹಿಂದೆ ಭರತನು ನಂದಿಗ್ರಾಮದಲ್ಲಿರುವಾಗ ಪಡಬೇಕಾದ ಎಲ್ಲಾ ಕಷ್ಟಗಳನ್ನೂ ಪಟ್ಟಿದ್ದಾನೆ. ಈಗ ಈ ಕಾರ್ಯ ಶ್ರಮವನ್ನು ನಾನೇ ವಹಿಸಿಕೊಳ್ಳುತ್ತೇನೆ" ಎಂದು ಹೇಳಿ ರಾಮನಿಗೆ ಕೈಮುಗಿದನು.

ರಾಮನು ಅದಕ್ಕೆ ಒಪ್ಪಿ, ಶತ್ರುಘ್ನನನ್ನು ಮಧುಪುರಕ್ಕೆ ರಾಜನನ್ನಾಗಿ ಅಭಿಷೇಕಿಸಲು ಏರ್ಪಾಡು ಮಾಡಿಸಿದನು. ಒಬ್ಬ ರಾಜನು ಸತ್ತು ಹೋದರೆ ಕೂಡಲೇ ಮತ್ತೊಬ್ಬ ರಾಜನು ಆ ರಾಜ್ಯವನ್ನು ಪಾಲಿಸಲು ಸಿದ್ಧನಾಗಿರಬೇಕಾಗಿತ್ತು. ಹಾಗೆ ಶತ್ರುಘ್ನನಿಗೆ ಮುಂದಾಗಿ ಮಧುಪುರದ ರಾಜ್ಯಾಭಿಷೇಕವು ಮುಗಿದ ಕೂಡಲೇ ರಾಮನು ತನ್ನಲ್ಲಿದ್ದ ಪ್ರತ್ಯೇಕವಾದ ಒಂದು ಬಾಣವನ್ನು ಶತ್ರುಘ್ನನಿಗೆ ಕೊಟ್ಟು, ಹೀಗೆಂದನು :

"ಈ ಬಾಣವು ಮಧುಕೈಟಭರನ್ನು ಕೊಂದಿರುವಂಥಾದ್ದು. ಇದನ್ನು ನಾನು ರಾವಣನ ಮೇಲೆ ಕೂಡಾ ಪ್ರಯೋಗಿಸಲಿಲ್ಲ. ಇದರಿಂದ ನೀನು ಲವಣಾಸುರನನ್ನು ಕೊಲ್ಲು. ಮತ್ತೊಂದು ಸಂಗತಿ, ಲವಣನ ಹತ್ತಿರ ಶಿವನ ತ್ರಿಶೂಲಕ್ಕೆ ಸಮವಾದ ಶೂಲವಿದೆ. ಅದು ಅವನ ಕೈಯಲ್ಲಿರುವಾಗ ಯಾರೂ ಅವನನ್ನು ಕೊಲ್ಲಲು ಸಾಧ್ಯವಿಲ್ಲ. ಆದ್ದರಿಂದ ನೀನು ಏನು ಮಾಡಬೇಕೆಂದರೆ, ಲವಣನ ತ್ರಿಶೂಲವು ಅವನ ಮನೆಯಲ್ಲೇ ಇರುತ್ತದೆ. ಅವನು ನಗರವನ್ನು ಬಿಟ್ಟು ಎಲ್ಲಿಗಾದರೂ ಹೋಗಿದ್ದ ಸಮಯ ನೋಡಿ, ನೀನು ನಗರದ ದ್ವಾರವನ್ನು ಮುತ್ತಿಗೆ ಹಾಕಬೇಕು. ಅವನು ಹಿಂದಿರುಗಿ ಬರುವಾಗ ದ್ವಾರದ ಹತ್ತಿರವೇ ಅವನನ್ನು ತಡೆದು ಕೊಲ್ಲಬೇಕು. ಯಾವ



ಪರಿಸ್ಥಿತಿಯಲ್ಲಿಯೂ ಅವನು ನಗರದೊಳಗೆ ಪ್ರವೇಶಿಸಲು ಬಿಡಬಾರದು. ತ್ರಿಶೂಲವು ಅವನ ಕೈಗೆ ಸಿಕ್ಕಕೂಡದು."

ಇದನ್ನು ಕೇಳಿದ ಮೇಲೆ ಶತ್ರುಘ್ನನು ಸೇನೆಗಳನ್ನು ಮುಂದಾಗಿ ಅಲ್ಲಿಗೆ ಕಳುಹಿಸಿ, ಆಮೇಲೆ ತಾನು ಒಬ್ಬಂಟಿಗನಾಗಿ ಹೋಗಲು ನಿಶ್ಚಯಿಸಿದನು. ತನ್ನನ್ನು ಕೊಲ್ಲಲು ಯಾರೋ ಬರುತ್ತಿರುವರೆಂದು ಲವಣನಿಗೆ ತಿಳಿಯಕೂಡದು. ಗ್ರೀಷ್ಮ ಋತುವಿನಲ್ಲಿಯೇ ಸೇನೆಗಳು ಗಂಗಾ ನದಿಯನ್ನು ದಾಟಿ ಅಲ್ಲಿ ಸೇರಬೇಕಿತ್ತು. ಶತ್ರುಘ್ನನು ವರ್ಷಾಕಾಲದ ಪ್ರಾರಂಭದಲ್ಲಿ ಬಿಲ್ಲು ಬಾಣಗಳನ್ನು ಧರಿಸಿಕೊಂಡು ಅಲ್ಲಿಗೆ ಹೋಗಿ ಲವಣಾಸುರನನ್ನು ಕೊಲ್ಲಬೇಕಿತ್ತು. ಈ ಬಗೆಯ ಯುದ್ಧಗತಿಯನ್ನು ರಾಮನೇ ನಿರ್ಣಯಿಸಿ ಶತ್ರುಘ್ನನಿಗೆ ತಿಳಿಸಿ ಹೇಳಿದನು.

ಆದರಂತೆಯೇ ಶತ್ರುಘ್ನನು ಮುಂದಾಗಿ ತನ್ನ ಸೇನೆಗಳನ್ನು ಕಳುಹಿಸಿ, ಮತ್ತೆ ಒಂದು ತಿಂಗಳು



ಕಳೆದ ಮೇಲೆ ತಾನೂ ಹೊರಟನು. ದಾರಿಯಲ್ಲಿ ಎರಡು ದಿನಗಳ ವರೆಗೆ ಅವನು ವಾಲ್ಮೀಕಿಯ ಆಶ್ರಮದಲ್ಲಿ ತಂಗಿದನು. ವಾಲ್ಮೀಕಿ ಅವನಿಗೆ ಆದರದಿಂದ ಆತಿಥ್ಯವಿತ್ತು, ಮಾತುಕತೆಯಾಡುತ್ತ, ಆ ಆಶ್ರಮವು ಒಂದು ಕಾಲದಲ್ಲಿ ರಘುವಂಶದವರದೇ ಎಂಬ ಸಂಗತಿಯನ್ನು ವಿವರಿಸಿ ಹೇಳಿದನು. ಅದೇನೆಂದರೆ :

ರಘುವಂಶದಲ್ಲಿ ಒಂದು ಕಾಲದಲ್ಲಿ ಸುದಾಸನೆಂಬವನೊಬ್ಬನಿದ್ದನು. ವೀರಸಹನೆಂಬವನು ಆ ಸುದಾಸನ ಕುಮಾರ. ವೀರಸಹನು ಚಿಕ್ಕತನದಲ್ಲೇ ಬೇಟೆಯಾಡಲು ಹೋದನು. ಆ ವನದಲ್ಲಿ ಇಬ್ಬರು ರಾಕ್ಷಸರಿದ್ದರು. ಹುಲಿ ರೂಪದಲ್ಲಿ ಮೃಗಗಳೊಂದಿಗೆ ತಿರುಗುತ್ತಾ, ಸಿಕ್ಕಿದ ಮೃಗಗಳನ್ನೆಲ್ಲಾ ಹಿಡಿದು ತಿಂದುಕೊಂಡಿದ್ದರು. ಅವರಿಂದ ಅರಣ್ಯವೆಲ್ಲಾ ಹಾಳಾಗಿ ಹೋಗುತ್ತಿತ್ತು. ಅದನ್ನು ನೋಡಿ ವೀರಸಹನಿಗೆ ಬಹಳ ಕೋಪ ಬಂದಿತು. ಅವನು ಆ ರಾಕ್ಷಸರಿಬ್ಬರನ್ನೂ ನೋಡಿದ ಕೂಡಲೇ ಒಬ್ಬನನ್ನು ಕೊಂದುಬಿಟ್ಟನು. ಆಗ ಎರಡನೇ ರಾಕ್ಷಸನು "ಎಲೋ ಪಾಪೀ! ಕಾರಣವೇನಿಲ್ಲದೆ ನನ್ನ ತಮ್ಮನನ್ನು ಕೊಂದೆಯಾ? ನಿನ್ನನ್ನು ಏನು ಮಾಡುವೆನೋ ನೋಡು!" ಎಂದು ಗರ್ಜಿಸಿ ಮಾಯವಾಗಿ ಹೋದನು.

ಮುಂದೆ ಸ್ವಲ್ಪ ಕಾಲ ಕಳೆಯಿತು. ಆ ರಾಜನು ಇದೇ ಆಶ್ರಮದಲ್ಲಿ ಬ್ರಹ್ಮಾಂಡವಾದ ಅಶ್ವಮೇಧಯಾಗವನ್ನು ಮಾಡಿದನು. ವಸಿಷ್ಠನೇ ಆ ಯಾಗವನ್ನು ಮಾಡಿಸಿದನು. ಯಾಗವು ಪೂರ್ತಿಯಾಗುವಷ್ಟರಲ್ಲಿ ಹಿಂದಿನ ರಾಕ್ಷಸನು ರಾಜನ ಮೇಲೆ ಹಗೆ ಹಿಡಿದು, ವಸಿಷ್ಠನ ರೂಪದಲ್ಲಿ ಬಂದು, "ರಾಜಾ! ಯಜ್ಞವು ಪೂರ್ತಿಯಾಯಿತು. ನನಗೆ ಒಳ್ಳೆಯ ಮಾಂಸ ಭೋಜನ ಮಾಡಿಸು" ಎಂದನು.

ರಾಜನು ಬಹಳ ಸಂತೋಷಪಟ್ಟು, ಅಡಿಗೆಯವನನ್ನು ಕರೆದು, "ನಮ್ಮ ಗುರುಗಳಿಗೆ ಹವಿಸ್ಸಿನ ಮಾಂಸದಿಂದ ರುಚಿಯಾದ ಭೋಜನವನ್ನು ತಯಾರಿಸು" ಎಂದು ಅಪ್ಪಣೆ ಕೊಟ್ಟನು.

ಇಷ್ಟರಲ್ಲಿ ಆ ರಾಕ್ಷಸನು ಅಡಿಗೆಯವನ ರೂಪದಲ್ಲಿ ನರಮಾಂಸದಿಂದ ಅಡಿಗೆಯನ್ನು ಸಿದ್ಧಮಾಡಿ ರಾಜನಿಗೆ ತೋರಿಸಿ "ಹವಿಸ್ಸಿನಿಂದ ಒಳ್ಳೆಯ ಅಡಿಗೆಯನ್ನು ಮಾಡಿದ್ದೇನೆ" ಎಂದನು ವಿನಯದಿಂದ.

ರಾಜನು ವಸಿಷ್ಠನಿಗೆ ತನ್ನ ಪತ್ನಿ ಮದಯಂತಿಯ ಕೈಯಿಂದ ನರಮಾಂಸದ ಅಡಿಗೆಯನ್ನು ಬಡಿಸಿದನು. ವಸಿಷ್ಠನು ತನಗೆ ಬಡಿಸಿದುದು ನರಮಾಂಸವೆಂದು ಗುರುತಿಸಿ ಮಹಾ ಕೋಪದಿಂದ, "ರಾಜಾ! ನೀನು ನರಭಕ್ಷಕನಾಗಿ ತಿರುಗಿಕೊಂಡಿರು" ಎಂದು ಘೋರವಾದ ಶಾಪವನ್ನು ಕೊಟ್ಟನು.

ರಾಜನಿಗೆ ಕೂಡಾ ಬಹಳ ಕೋಪ ಬಂದು, ವಸಿಷ್ಠನನ್ನು ಶಪಿಸಲು ನೀರನ್ನು ತೆಗೆದುಕೊಂಡನು. ಅವನು ಶಪಿಸುವುದರೊಳಗೆ ಮದಯಂತಿ ಅಡ್ಡ

ಬಂದು. "ನಮಗೆ ದೇವರಂತಹ ಇವರನ್ನು ಶಪಿಸಬಾರದು" ಎಂದಳು. ಆಗ ರಾಜನು ಕೈಯಲ್ಲಿದ್ದ ಶಾಪ ಜಲವನ್ನು ತನ್ನ ಪಾದಗಳ ಮೇಲೆಯೇ ಸುರಿದುಕೊಂಡನು. ಆ ನೀರಿನಿಂದ ರಾಜನ ಪಾದಗಳು ಕಲ್ಮಷದಿಂದ ಕಪ್ಪಾದುವು. ಆಗಿನಿಂದ ಅವನಿಗೆ ಕಲ್ಮಾಷಪಾದನೆಂಬ ಹೆಸರು ಬಂದಿತು.

ಆಮೇಲೆ ವಸಿಷ್ಠನು ನಡೆದ ಸಂಗತಿಯನ್ನೆಲ್ಲಾ ಗ್ರಹಿಸಿಕೊಂಡು, ಕಲ್ಮಾಷಪಾದನಿಗೆ ಶಾಪದ ಫಲವು ಹನ್ನೆರಡು ವರ್ಷಗಳ ವರೆಗೆ ಮಾತ್ರ ಇರುವಂತೆ ಅನುಗ್ರಹಿಸಿದನು.

ರಾಜನು ಹನ್ನೆರಡು ವರ್ಷಗಳ ವರೆಗೆ ನರಭಕ್ಷಕನಾಗಿ ಜೀವಿಸಿ, ಶಾಪ ಕಳೆದುಕೊಂಡು ಮೊದಲಿನಂತೆ ಮಾನವನಾಗಿ ಎಂದಿನಂತೆ ಚೆಂದಾಗಿ ರಾಜ್ಯಪಾಲನೆ ಮಾಡಿದನು.

ವಾಲ್ಮೀಕಿಯಿಂದ ಈ ಕಥೆಯನ್ನು ಕೇಳಿ ಶತ್ರುಘ್ನನು ವಾಲ್ಮೀಕಿಯ ಪರ್ಣಶಾಲೆಯನ್ನು ಪ್ರವೇಶಿಸುತ್ತಿರಲು, ಆಗಲೇ ಸೀತೆ ಅವಳಿ ಜವಳಿ ಮಕ್ಕಳನ್ನು ಪ್ರಸವಿಸಿದಳೆಂಬ ವಾರ್ತೆ ಬಂದಿತು. ಮುನಿ ಕುಮಾರರು ಈ ವಾರ್ತೆಯನ್ನು ವಾಲ್ಮೀಕಿಯೊಂದಿಗೆ ಅರಿಕೆ ಮಾಡಿದನು.

ಕೂಡಲೇ ವಾಲ್ಮೀಕಿ ಅಲ್ಲಿಗೆ ಹೋಗಿ, ಬಾಲಚಂದ್ರರಂತೆ ಪ್ರಕಾಶಿಸುವ ಶಿಶುಗಳನ್ನು ನೋಡಿ, ರಕ್ಷೆಗಳನ್ನು ಕಟ್ಟಿ, ಮೊದಲಿನವನಿಗೆ ಕುಶನೆಂದೂ, ಎರಡನೆಯವನಿಗೆ ಲವನೆಂದೂ ಹೆಸರುಗಳನ್ನಿಟ್ಟನು.

ಈ ಘಟನೆ ಸರಿಯಾಗಿ ಅರ್ಧರಾತ್ರಿಯ ಹೊತ್ತಿನಲ್ಲಿ ನಡೆಯಿತು. ಆ ಸಮಯದಲ್ಲಿಯೇ ಶತ್ರುಘ್ನನು ಸೀತೆಯ ಬಳಿಗೆ ಹೋಗಿ, "ಒಳ್ಳೆಯ ಅದೃಷ್ಟ ತಾಯೇ!" ಎಂದು ತನ್ನ ಸಂತೋಷವನ್ನು ವ್ಯಕ್ತಪಡಿಸಿದನು.

ಮರುದಿನ ಶತ್ರುಘ್ನನು ವಾಲ್ಮೀಕಿಯಿಂದ ಅಪ್ಪಣೆ ಪಡೆದು ಪಶ್ಚಿಮ ದಿಕ್ಕಿಗೆ ಪ್ರಯಾಣ ಮಾಡುತ್ತ, ಏಳನೇ ದಿನದಲ್ಲಿ ಯಮುನಾ ತೀರವನ್ನು ಸೇರಿ, ಅಲ್ಲಿ ಮುನಿಗಳ ಆಶ್ರಮದಲ್ಲಿ ಸತ್ಕಾಲಕ್ಷೇಪ ಮಾಡುತ್ತ ಆ ರಾತ್ರಿಯನ್ನು ಕಳೆದನು.



ಮತ್ತೆ ಬೆಳಗಾದ ಮೇಲೆ ಶತ್ರುಘ್ನನು ಚ್ಯವನ ಮಹರ್ಷಿಯನ್ನು ನೋಡಿ, ಲವಣಾಸುರನನ್ನೂ ಅವನ ತ್ರಿಶೂಲದ ಸಂಗತಿಯನ್ನೂ ಕೇಳಿದನು. ಆ ಲವಣನು ಶಿವದತ್ತವಾದ ಆ ತ್ರಿಶೂಲದಿಂದ ಎಷ್ಟೋ ದಾರುಣ ಕೃತ್ಯ ಮಾಡಿದ್ದಾನೆಂದು ಹೇಳುತ್ತ, ಮಾಂಧಾತನ ವೃತ್ತಾಂತವನ್ನು ವಿವರಿಸಿದನು ಚ್ಯವನ.

ಅಯೋಧ್ಯೆ ರಾಜನಾದ ಯುವನಾಶ್ವನ ಕುಮಾರನು ಮಾಂಧಾತ. ಮಹಾ ಬಲಿಷ್ಠನಾದ ಮಾಂಧಾತನು ಭೂಮಿಯಲ್ಲಿದ್ದ ರಾಜರೆಲ್ಲರನ್ನೂ ಜಯಿಸಿದನು. ಆ ಸಂಗತಿಯನ್ನು ತಿಳಿದು ದೇವೇಂದ್ರನೇ ಮೊದಲಾದ ದೇವತೆಗಳು ಹೆದರಿದರು. ಇಂದ್ರನ ಅರ್ಧಾಸನವನ್ನೂ ದೇವತೆಗಳ ಸೇವೆಯನ್ನೂ ಕೇಳಲು ಬಂದ ಮಾಂಧಾತನೊಂದಿಗೆ ಇಂದ್ರನು ಮುಂದಾಗಿಯೇ "ಮೊದಲು ಭೂಲೋಕವನ್ನು ಜಯಿಸಿ ಬಾ. ಆಗ ದೇವಲೋಕವನ್ನು ನಿನಗೆ ಕೊಡುತ್ತೇವೆ" ಎಂದನು.

"ಇದೇನು ಮಾತು? ಭೂಲೋಕವನ್ನೆಲ್ಲಾ ಈ ಮೊದಲೇ ಜಯಿಸಿದ್ದೇನೆ. ಅಲ್ಲಿ ನನ್ನ ಶಾಸನಗಳಿಗೆ ಇದಿರೇ ಇಲ್ಲ" ಎಂದನು ಮಾಂಧಾತ ರಾಜ.

"ಮಾಂಧಾತಾ, ಮಧುವನದಲ್ಲಿ ಲವಣಾಸುರನೆಂಬವನಿದ್ದಾನೆ. ಅವನು ನಿನ್ನ ಶಾಸನಗಳಿಗೆ ತಲೆಬಾಗಿ ನಡೆದುಕೊಳ್ಳುತ್ತಿದ್ದಾನೆಯೆ?" ಎಂದು ಇಂದ್ರನು ಮಾಂಧಾತನನ್ನು ಕೇಳಿದನು.

ಅದನ್ನು ಕೇಳಿ ಮಾಂಧಾತನು ನಾಚಿ ತಲೆತಗ್ಗಿಸಿ ಭೂಮಿಗೆ ಹಿಂದಿರುಗಿ ಬಂದು, ಲವಣಾಸುರನನ್ನು ಜಯಿಸಲು ಸೇನಾ ಸಮೇತನಾಗಿ ಮಧುವನಕ್ಕೆ ಹೋಗಿ, ತನಗೆ ಬಗ್ಗಿ ಬಿಡುವಂತೆ ಲವಣಾಸುರನಿಗೆ ದೂತನ ಮೂಲಕ ಸುದ್ದಿ ಕಳುಹಿಸಿದನು.

ಹೋದ ದೂತನು ಎಷ್ಟು ದಿನಗಳಾದರೂ ಹಿಂದಿರುಗಿ ಬಾರದಿರಲು, ಮಾಂಧಾತನು ಲವಣನ ಮೇಲೆ ಯುದ್ಧ ಮಾಡಲು ಪ್ರಾರಂಭಿಸಿದನು. ಲವಣನು ಬಂದು ಮಾಂಧಾತನನ್ನು ನೋಡಿ ನಕ್ಕು ತನ್ನ ತ್ರಿಶೂಲವನ್ನು ಪ್ರಯೋಗಿಸಿದ್ದೇ ತಡ, ಅದು ಮಾಂಧಾತನನ್ನೂ ಅವನ ಸೈನ್ಯವೆಲ್ಲವನ್ನೂ ಭಸ್ಮ ಮಾಡಿ ಬಿಟ್ಟಿತು.

ಚ್ಯವನನು ಈ ಸಂಗತಿಯನ್ನು ಹೇಳಿ, "ಅವನ ಕೈಯಲ್ಲಿ ಆ ತ್ರಿಶೂಲವಿರುವಾಗ ಹೀಗೇ ಆಗುತ್ತದೆ. ಅದು ಅವನ ಕೈಯಲ್ಲಿಲ್ಲದ ಸಮಯದಲ್ಲೇ ನೀನು ಅವನನ್ನು ಕೊಲ್ಲಲು ಸಾಧ್ಯ. ಅದು ನಾಳೆಯೇ ಸಾಧ್ಯವಾಗುತ್ತದೆ" ಎಂದನು.

ಇಂತಹ ಸ್ವಾರಸ್ಯದ ಮಾತುಗಳಿಂದ ರಾತ್ರಿ ಸುಲಭವಾಗಿ ಕಳೆಯಿತು. ಶತ್ರುಘ್ನನು ಉತ್ಸಾಹದಿಂದ ಎದ್ದು ಲವಣಾಸುರನನ್ನು ಸಂಧಿಸುವ ತವಕದಲ್ಲಿದ್ದನು.






ಮರುದಿನ ಬೆಳಗಾದ ಕೂಡಲೇ ಲವಣಾಸುರನು ಆಹಾರ ಸಂಪಾದಿಸಿಕೊಂಡು ಬರಲು ಮಧುಪುರದ ಮೇರೆಯನ್ನು ದಾಟಿ ಕಾಡಿನೊಳಗೆ ಹೋದನು. ಆ ಸಮಯದಲ್ಲಿ ಶತ್ರುಘ್ನನು ಯಮುನಾ ನದಿಯನ್ನು ದಾಟಿ ಮಧುಪುರದ ದ್ವಾರದ ಹತ್ತಿರ ಬಂದು ಅರಣ್ಯದಿಂದ ಹಿಂದಿರುಗುವ ಲವಣಾಸುರನನ್ನು ಕಾಯುತ್ತ ನಿಂತುಕೊಂಡನು.

ಮಧ್ಯಾಹ್ನದ ಹೊತ್ತು ಸಮೀಪಿಸುತ್ತಿರಲು ಲವಣನು ಕಾಡಿನಿಂದ ಈಕಡೆಗೆ ಬರುವುದು ಕಂಡಿತು. ಅವನು ಬೇಟೆಯಾಡಿ ಕೊಂದ ಪ್ರಾಣಿಗಳೆಲ್ಲವನ್ನೂ ಹೊತ್ತುಕೊಂಡು ಬರುತ್ತಿದ್ದನು. ಅವನು ಸಮೀಪಿಸಿ, ದ್ವಾರದಲ್ಲಿ ಧನುರ್ಬಾಣಗಳೊಂದಿಗೆ ನಿಂತಿದ್ದ ಶತ್ರುಘ್ನನನ್ನು ನೋಡಿ, ವಿಕಟವಾಗಿ ನಗುತ್ತ, "ಎಲೋ ಮನುಷ್ಯಾ ! ಭಲೇ ಬೇಟೆ ! ಈ ದಿನ ನನಗೆ ಬಹು ರುಚಿಯಾದ ಔತಣದೂಟ !" ಎಂದನು.

ಅವನ ಅಟ್ಟಹಾಸವನ್ನು ನೋಡಿ ಶತ್ರುಘ್ನನಿಗೆ ರೋಷವೆದ್ದು ಕಣ್ಣುಗಳು ಕೆಂಪಾದುವು "ಎಲೋ ಕ್ರೂರ ಲವಣಾ ! ಸಾಧುಜನ ಕಂಟಕನಾಗಿರುವ ನಿನ್ನೊಂದಿಗೆ ಯುದ್ಧಮಾಡಿ ಕೊಲ್ಲಲಿಕ್ಕೆ ಬಂದವನು ನಾನು ! ಈಗ ನೀನೇ ನನ್ನ ಬೇಟೆ !" ಎಂದು ಗರ್ಜಿಸಿದನು ಶತ್ರುಘ್ನ.

"ಯಾವ ಪೋರನು ನೀನು ?" ಎಂದು ಲವಣನು ಕೇಳಲು, "ದಶರಥ ಮಹಾರಾಜನ ಮಗ ನಾನು. ರಾಮನ ತಮ್ಮನು ನಾನು. ಶತ್ರುಘ್ನ ! ಈಗ ನನ್ನ ಕೈಯಲ್ಲೇ ನಿನಗೆ ಮರಣ ! ಈ ದಿನ ನಿನ್ನ ಆಯುಸ್ಸು ಮುಗಿಯುತ್ತದೆ" ಎಂದನು.

ಲವಣನು ಎಗತಾಳಿಯಾಗಿ ನಕ್ಕು, "ನನಗೆ ಮಾವನಾಗಬೇಕಾದ ರಾವಣನನ್ನು ನಿನ್ನ ಅಣ್ಣನು ಕೊಂದಿರುವನೆಂದು ಗರ್ವಿಸುವಿಯಾ ? ನಾನು ರಾವಣನಂಥವನಲ್ಲ. ಮಹಾ ಮಹಾ ವೀರರನ್ನೇ ಕೊಂದ ಲವಣಾಸುರ ! ನಿನ್ನಂಥವರು ನನಗೆ ಹುಲ್ಲಿಗೆ ಸಮಾನರು. ನನ್ನೊಡನೆ ನೀನು ಯುದ್ಧ ಮಾಡುವಿಯೇನು ? ನಿನ್ನ ತೋಳಿನ ತೀಟೆ ತೀರಿಸುತ್ತೇನೆ.

೧೧. ಶಂಬೂಕ ವಧೆ




ಒಳಗೆ ಹೋಗಿ ಆಯುಧ ತರುತ್ತೇನೆ, ಯುದ್ಧಕ್ಕೆ ಸಮಯಾಸಮಯವಿದೆಯಷ್ಟೆ? ಈಗಲೇ ಬರುತ್ತೇನೆ, ಬಿಡು ದಾರಿ" ಎಂದನು.

"ನನ್ನ ಕಣ್ಣಿಗೆ ಬಿದ್ದ ಮೇಲೆ ನಿನ್ನನ್ನು ಹಾಗೆಲ್ಲಾ ಬಿಡುವೆನೆಂದುಕೊಂಡೆಯಾ? ನಿನ್ನ ಬಲದ ರಹಸ್ಯವೆಲ್ಲಾ ನನಗೆ ಗೊತ್ತಿದೆ. ಈ ಹುಲ್ಲಿನಂಥವನೊಡನೆ ಯುದ್ಧ ಮಾಡಲು ನಿನಗೆ ಶಿವನ ಆಯುಧ ಬೇಕೇನು? ಈ ಕ್ಷಣದಲ್ಲೇ ನೀನು ಸಾಯಬೇಕು!" ಎಂದನು ಶತ್ರುಘ್ನ.

ಲವಣನು ಹಲ್ಲು ಕಡಿದು, ಪ್ರಾಣಿಗಳ ಶವಗಳನ್ನು ಕೆಳಗೆ ಹಾಕಿ ಕೈ ಹೊಸೆದುಕೊಂಡು ಒಂದು ಮರವನ್ನು ಕಿತ್ತು ಶತ್ರುಘ್ನನ ಮೇಲೆ ಬೀಸಿ ಒಗೆದನು. ಅವನು ಒಂದರ ಮೇಲೊಂದಾಗಿ ಕಿತ್ತು ಬಿಸುಡುವ ಮರಗಳನ್ನು ಶತ್ರುಘ್ನನು ತನ್ನ ಬಾಣಗಳಿಂದ ಹೊಡೆದು ಕಡಿದು ಚೆದರಿಸಿದನು. ಒಂದು ಮರವು ಶತ್ರುಘ್ನನ ತಲೆಗೆ ತಗಲಿದುದರಿಂದ ಶತ್ರುಘ್ನನು ತಲೆ ಹಿಡಿದುಕೊಂಡು ಮೆಲ್ಲನೆ ಬಿದ್ದು ಮೂರ್ಛೆ ಹೋದನು.

ಅವನನ್ನು ನೋಡಿ ಮಂದಮತಿಯಾದ ಲವಣನು ಶತ್ರುಘ್ನನು ಸತ್ತನೆಂದುಕೊಂಡು, ತನ್ನ ಶೂಲವನ್ನು ತಂದುಕೊಳ್ಳಲು ಹೋಗಲಿಲ್ಲ. ಅದಕ್ಕೆ ಬದಲಾಗಿ ಅವನು ತಾನು ಬೇಟೆಯಾಡಿ ತಂದ ಮೃಗಗಳ ಶವಗಳ ಮೂಟೆಯನ್ನು ಎತ್ತಿಕೊಂಡು ಒಳಗೆ ಹೋಗಲುದ್ಯುಕ್ತನಾದನು. "ಈ ಹುಲ್ಲು ಮಾನವನು ನನಗೊಂದು ಲೆಕ್ಕವೆ? ಇವನನ್ನು ಪ್ರತ್ಯೇಕವಾಗಿ ಬೇಯಿಸಿ ತಿಂದು ಜೀರ್ಣಿಸುತ್ತೇನೆ" ಎಂದು ಹೇಳಿಕೊಳ್ಳುತ್ತ ಅವನು ಶತ್ರುಘ್ನನನ್ನು ದಾಟಿಹೋಗುವಷ್ಟರಲ್ಲಿ ಶತ್ರುಘ್ನನು ಮೂರ್ಛೆಯಿಂದೆಚ್ಚತ್ತು ಹಾರಿ ದ್ವಾರಕ್ಕೆ ಅಡ್ಡವಾಗಿ ನಿಂತನು.

ಮರುಕ್ಷಣದಲ್ಲಿ ಶತ್ರುಘ್ನನು ರಾಮನು ತನಗೆ ಕೊಟ್ಟ ಬಾಣವನ್ನು ಧನುಸ್ಸಿಗೆ ಸಂಧಿಸಿ ಲವಣಾಸುರನ ಮೇಲೆ ಪ್ರಯೋಗಿಸಿದನು. ಆ ಬಾಣವು ಬೆಂಕಿಯ ಜ್ವಾಲೆಯನ್ನುಗುಳುತ್ತಾ ಹೋಗಿ ಲವಣನ ಗುಂಡಿಗೆಯನ್ನು ಸೀಳಿತು. ಲವಣನು ಆರ್ಭಟಿಸಿಕೊಂಡು ಸತ್ತು ಬೀಳುವಾಗಲೇ, ಅವನ ಶಿವದತ್ತವಾದ ತ್ರಿಶೂಲವು ಕೈಲಾಸದಲ್ಲಿರುವ ಶಿವನ ಬಳಿಗೆ ಹಾರಿ ಹೋಯಿತು.

ಅನಂತರ ಶತ್ರುಘ್ನನು ತನ್ನ ಸೇನೆಯನ್ನು ಕರೆಯಿಸಿ ಮಧುಪುರವನ್ನು ಆಕ್ರಮಿಸಿ ಸಿಂಹಾಸನವನ್ನೇರಿ ರಾಜನಾಗಿ ತನ್ನ ಪರಿಪಾಲನೆಯನ್ನು ಪ್ರಾರಂಭಿಸಿದನು. ಶತ್ರುಘ್ನನ ಧರ್ಮ ಪರಿಪಾಲನೆ ಪ್ರಾರಂಭವಾದುದನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು.

ಮತ್ತೆ ಹನ್ನೆರಡು ವರ್ಷಗಳು ಕಳೆದ ಮೇಲೆ ಶತ್ರುಘ್ನನಿಗೆ ರಾಮನನ್ನು ನೋಡಬೇಕೆಂದು ತೋರಿತು. ಅವನು ತನ್ನ ಪರಿವಾರದೊಂದಿಗೆ ಸ್ವಲ್ಪ ಸೇನೆಯನ್ನೂ ಕರೆದುಕೊಂಡು ಅಯೋಧ್ಯೆಗೆ

ಪ್ರಯಾಣ ಸಾಗಿಸುತ್ತ ದಾರಿಯಲ್ಲಿ ವಾಲ್ಮೀಕಿಯ ಆಶ್ರಮದಲ್ಲಿ ಒಂದು ರಾತ್ರಿ ತಂಗಿದನು. ಅಲ್ಲಿ ಅವನಿಗೆ ಹೊಸ ಸಂತೋಷವು ಅನುಭವಕ್ಕೆ ಬಂತು.

ವಾಲ್ಮೀಕಿ ಶತ್ರುಘ್ನನಿಗೆ ಅರ್ಘ್ಯಪಾದ್ಯಗಳನ್ನಿತ್ತು ಆಥಿತ್ಯ ಉಪಚಾರಗಳನ್ನು ಕೊಟ್ಟು ಆದರಿಸಿದನು. ಅವನ ಸೇನೆಗಳಿಗೂ ವಾಲ್ಮೀಕಿಯ ಆಶ್ರಮದಲ್ಲಿ ಭೋಜನೋಪಚಾರವಾಯಿತು. ಆಮೇಲೆ ವಾಲ್ಮೀಕಿ ತಾನು ರಚಿಸಿದ ರಾಮಕಥೆಯನ್ನು ರಾಗತಾಳಗಳಿಂದ ಹಾಡಿಸಿದನು. ನಡೆದು ಹೋದ ರಾಮನ ಕಥೆಗಳು ಮತ್ತೆ ಎಲ್ಲರ ಕಣ್ಣಿಗೂ ಕಟ್ಟಿದಂತಾಗಿ, ಅದ್ಭುತವೂ ಅನಿರ್ವಚನೀಯವೂ ಆದ ಸಂತೋಷವನ್ನು ಎಲ್ಲರೂ ಅನುಭವಿಸಿದರು.

ಆ ರಾತ್ರಿ ಪೂರಾ ರಾಮಕಥೆಯನ್ನು ಕೇಳುವುದರಲ್ಲೇ ಕಳೆದುಹೋಯಿತು. ಮರುದಿನ ಶತ್ರುಘ್ನನು ವಾಲ್ಮೀಕಿಯಿಂದ ಅಪ್ಪಣೆ ಪಡೆದು ಅಯೋಧ್ಯೆಗೆ ಹೋಗಿ ರಾಮನನ್ನು ನೋಡಿ, "ಅಣ್ಣಾ, ನಿನ್ನ ಆಜ್ಞೆಯಂತೆ ನೀನು ಕೊಟ್ಟ ಒಂದೇ ಒಂದು ಬಾಣದಿಂದ ಲವಣಾಸುರನನ್ನು ಕೊಂದು ಅವನ ರಾಜ್ಯವನ್ನು ಆಳಿಕೊಂಡಿದ್ದೇನೆ. ಹನ್ನೆರಡು ವರ್ಷಗಳಿಂದ ನಿನ್ನನ್ನು ನೋಡದೆ ಅಲ್ಲೇ ಇರಲು ಸಾಧ್ಯವಾಗದೆ ಬಂದಿದ್ದೇನೆ" ಎಂದನು.

ರಾಮನು ಶತ್ರುಘ್ನನನ್ನು ಬಾಚಿ ತಬ್ಬಿ ಆಲಿಂಗಿಸಿ, "ಅಪ್ಪಾ, ರಾಜನಾದ ಮೇಲೆ ರಾಜ್ಯವನ್ನಾಳದೆ ಹೆಚ್ಚು ದಿನ ಬಿಟ್ಟಿರುವುದು ಒಳ್ಳೆಯದಲ್ಲ. ಹೋಗಿ ನಿನ್ನ ರಾಜ್ಯವನ್ನು ನೋಡಿಕೊಂಡಿರು. ಹೀಗೆ ಎಂದಾದರೂ ನನ್ನನ್ನು ನೋಡಬೇಕೆನಿಸಿದಾಗ ಬಂದು ಹೋಗುತ್ತಾ ಇರು" ಎಂದು ಹೇಳಿ ಆದರಿಸಿ, ಬೇಗವಲ್ಲೇ ಅವನನ್ನು ಮಧುಪುರಕ್ಕೆ ಕಳುಹಿಸಿದನು.

ಭರತ ಲಕ್ಷ್ಮಣರು ಬಹು ದೂರದವರೆಗೆ ಶತ್ರುಘ್ನನೊಂದಿಗೆ ಹೋಗಿ ಅವನನ್ನು ಸಾಗಕಳುಹಿಸಿ ಹಿಂದಿರುಗಿದರು.

ಇದಾಗಿ ಕೆಲವು ದಿನಗಳ ಮೇಲೆ ಯಾವುದೋ ಹಳ್ಳಿಯ ಬ್ರಾಹ್ಮಣನೊಬ್ಬನು, ತನ್ನ ಐದು





ವಯಸ್ಸಿನ ಮಗನ ಶವವನ್ನು ತಂದು ರಾಮ ಭವನದ ರಾಜದ್ವಾರದ ಹತ್ತಿರ ನಿಂತುಕೊಂಡು, ರೋದಿಸಲು ತೊಡಗಿದನು. ತನಗಿರುವ ಏಕಮಾತ್ರ ಪುತ್ರನು ಅಕಾಲ ಮರಣ ಹೊಂದಿದನ್ನು ಹೇಳಿಕೊಂಡು ಅಳುತ್ತಾ ಆ ಬ್ರಾಹ್ಮಣನು, ರಾಜನ ಪರಿಪಾಲನೆ ಸರಿಯಾಗಿದ್ದರೆ ಇಂತಹ ಅಕಾಲ ಮರಣ ಬರುತ್ತಿದ್ದಿಲ್ಲವೆಂದೂ, ಇಷ್ಟುಕಾಲ ಇಕ್ಷ್ವಾಕುಗಳ ಪರಿಪಾಲನೆಯಲ್ಲಿ ಹೀಗಾದುದಿಲ್ಲವೆಂದೂ, ವನವಾಸದಲ್ಲಿ ರಾಜ ಧರ್ಮಗಳನ್ನು ಮರೆತು ಹೋದುದರಿಂದಲೇ ರಾಮನ ಪರಿಪಾಲನೆಯಲ್ಲಿ ಹೀಗಾಯಿತೆಂದೂ ಹೇಳಿಕೊಂಡು ಕೂಗಿದನು.

ಈ ಸಂಗತಿ ತಿಳಿದು ರಾಮನಿಗೆ ಬಹಳ ಚಿಂತೆಯಾಯಿತು. ಮಂತ್ರಿಗಳನ್ನೂ ವಸಿಷ್ಠನೇ ಮೊದಲಾದ ಬ್ರಾಹ್ಮಣರನ್ನೂ ಕರೆಯಿಸಿ ಅವರೊಂದಿಗೆ ಬ್ರಾಹ್ಮಣ ಬಾಲಕನ ಅಕಾಲ ಮರಣಕ್ಕೆ ಕಾರಣವೇನೆಂದು ಪ್ರಶ್ನೆ ಮಾಡಿದನು. ಏನು ಹೇಳಬೇಕೆಂದು ಯಾರಿಗೂ ಗೊತ್ತಾಗಲಿಲ್ಲ. ಆಗ ನಾರದನು ಅಲ್ಲಿಗೆ ಬಂದು ಒಬ್ಬ ಶೂದ್ರನು ದೊಡ್ಡ ತಪಸ್ಸು ಮಾಡುತ್ತಿದ್ದಾನೆಂದೂ, ಅದು ಯುಗಧರ್ಮಕ್ಕೆ ವಿರುದ್ಧವಾದುದೆಂದೂ, ಈ ಅಧರ್ಮದಿಂದಲೇ ಬಾಲಕನ ಅಕಾಲ ಮರಣವಾಗಿದೆಯೆಂದೂ ಹೇಳಿದಾಗ ಅದು ನಿಜವೆಂದು ಗೊತ್ತಾಯಿತು.

ಕೂಡಲೇ ರಾಮನು ಲಕ್ಷ್ಮಣನೊಂದಿಗೆ, "ನೀನು ಹೋಗಿ ಆ ಬ್ರಾಹ್ಮಣನಿಗೆ ಸಮಾಧಾನ ಮಾಡಿ ಬಾಲಕನ ಶವವನ್ನು ತೈಲಭಾಂಡದಲ್ಲಿ ಭದ್ರವಾಗಿರಿಸು" ಎಂದನು.

ಆಮೇಲೆ ರಾಮನು ಆಯುಧಗಳನ್ನು ತೆಗೆದುಕೊಂಡು ಪುಷ್ಪಕವನ್ನೇರಿ ಮೂರು ದಿಕ್ಕುಗಳಲ್ಲಿಯೂ ಹುಡುಕುತ್ತ ದಕ್ಷಿಣ ದಿಕ್ಕಿಗೆ ತಿರುಗಿದನು. ಆಗ ಒಂದು ಸರೋವರದಲ್ಲಿ ತಲೆಕೆಳಗಾಗಿ ಮುಳುಗಿ ಶ್ವಾಸ ಬಂಧನಮಾಡಿ ತಪಸ್ಸು ಮಾಡಿಕೊಂಡಿರುವ ಒಬ್ಬ ಮನುಷ್ಯನನ್ನು ನೋಡಿದನು.

ರಾಮನು ವಿಮಾನದಿಂದಿಳಿದು ಆ ವ್ಯಕ್ತಿಯ ಸಮೀಪಕ್ಕೆ ಹೋಗಿ, ಅವನನ್ನು ಕರೆದೆಬ್ಬಿಸಿ, "ನಾನು ದಶರಥ ಮಹಾರಾಜನ ಮಗ ರಾಮನು. ನಿನ್ನ ಸಂಗತಿ ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಕೇಳುತ್ತಿದ್ದೇನೆ. ನೀನು ಯಾವ ಜಾತಿಯವನು? ಯಾವುದಕ್ಕಾಗಿ ಈ ಕಠೋರ ತಪಸ್ಸು ಮಾಡುತ್ತಿರುವಿ? ಯಾರು ನಿನಗೆ ತಪಸ್ಸು ಮಾಡಲು ಹೇಳಿದರು?" ಎಂದು ಕೇಳಿದನು.

ಅದಕ್ಕೆ ಆ ತಾಪಸಿ, "ರಾಜಾ, ನಾನು ಜಾತಿಯಲ್ಲಿ ಶೂದ್ರನು. ಶಂಬೂಕನೆಂದು ನನ್ನ ಹೆಸರು. ಯಾರೂ ಹೇಳದೆ ನಾನಾಗಿಯೇ ದೇಹದೊಂದಿಗೆ ಸ್ವರ್ಗಕ್ಕೆ ಹೋಗಬೇಕೆಂದು ಹೀಗೆ ತಪಸ್ಸು ಮಾಡುತ್ತಿದ್ದೇನೆ" ಎಂದು ಅವನು ಇನ್ನೂ ಏನೋ ಹೇಳಲಿರುವುದರೊಳಗೆ ರಾಮನು ತನ್ನ ಕತ್ತಿಯಿಂದ ಶಂಬೂಕನ ತಲೆಯನ್ನು ಕಡಿದುಬಿಟ್ಟನು.



ಕೂಡಲೇ ದೇವತೆಗಳು ರಾಮುನ ಮೇಲೆ ಹೂ ಮಳೆಗರೆದರು. ದೇವದುಂದುಭಿಗಳು ಮೊಳಗಿದವು. "ರಾಮಾ! ಈ ಶೂದ್ರನು ಸ್ವರ್ಗಕ್ಕೆ ಬಾರದಂತೆ ಮಾಡಿ ಸ್ವರ್ಗವನ್ನು ಕಾಪಾಡಿದಿ! ಇದಕ್ಕಾಗಿ ಏನು ವರ ಬೇಕಾದರೂ ಕೇಳು! ಕೊಡುತ್ತೇವೆ" ಎಂದರು ದೇವತೆಗಳು.

"ಹಾಗಾದರೆ ಅಕಾಲ ಮರಣಕ್ಕೆ ತುತ್ತಾದ ಬ್ರಾಹ್ಮಣ ಬಾಲಕನನ್ನು ಬದುಕಿಸಿರಿ" ಎಂದು ವರ ಕೇಳಿದನು ರಾಮು.

"ಶಂಬೂಕನ ತಲೆ ಕಡಿದ ಮರುಕ್ಷಣದಲ್ಲೇ ಆ ಬಾಲನು ಬದುಕಿದ್ದಾನೆ" ಎಂದು ಹೇಳಿ ದೇವತೆಗಳು ಹೊರಟು ಹೋದರು.

ರಾಮುನು ಅಲ್ಲಿಂದ ಸಮೀಪದಲ್ಲಿದ್ದ ಅಗಸ್ತ್ಯನ ಆಶ್ರಮಕ್ಕೆ ಹೋಗಿ, ಆ ಮುನಿಯಿಂದ ಆಥಿತ್ಯ ಸತ್ಕಾರಗಳನ್ನು ಸ್ವೀಕರಿಸಿದನು. ಅಗಸ್ತ್ಯನು ರಾಮುನಿಗೆ ಕಲ್ಪಾಭರಣವೆಂಬ ದಿವ್ಯವಾದೊಂದು ಆಭರಣವನ್ನು ಬಹುಮಾನವಾಗಿ ಕೊಟ್ಟನು. ರಾಮುನು ಅದನ್ನು ಸ್ವೀಕರಿಸಿ, "ಸ್ವಾಮಿ, ಈ ದಿವ್ಯಾಭರಣವನ್ನು ನಿಮಗೆ ಯಾರು ಕೊಟ್ಟರು?" ಎಂದು ಕೇಳಿದನು.

ಈ ಪ್ರಶ್ನೆಗೆ ಉತ್ತರವಾಗಿ ಅಗಸ್ತ್ಯನು ಶ್ವೇತನ ಕಥೆಯನ್ನು ಹೇಳಿದನು. ಅದೇನೆಂದರೆ, ಸಾವಿರ ಯೋಜನ ವಿಸ್ತಾರವಾದ ಒಂದು ಅರಣ್ಯವಿದ್ದಿತು. ಅದರ ನಡುವೆ ಒಂದು ಯೋಜನ ಚದರವಿರುವ ಸರೋವರವಿದ್ದಿತು. ಆ ಅರಣ್ಯದಲ್ಲಿ ಒಂದು ಪಕ್ಷಿ ಯಾಗಲಿ, ಮೃಗವಾಗಲಿ ಇರಲಿಲ್ಲ. ಸರೋವರದ ಸಮೀಪದಲ್ಲಿ ಒಂದು ಆಶ್ರಮವಿದ್ದಿತು. ಅಗಸ್ತ್ಯನು ಆ ಆಶ್ರಮಕ್ಕೆ ಹೋಗಿ, ಒಂದು ರಾತ್ರಿ ಅಲ್ಲಿಯೇ ತಂಗಿದ್ದು, ಬೆಳಂಜಾಮದಲ್ಲಿ ಎದ್ದು ಸರೋವರದ ಬಳಿಗೆ ಹೋದನು. ಸರೋವರದ ತೀರದಲ್ಲಿ ಪುಷ್ಟಿಯಾದ ಒಂದು ಶವವಿರುವುದು ಕಂಡಿತು. ಶವವು ಸ್ವಲ್ಪವೂ ಕೆಡದೆ ನಿದ್ದೆಯಲ್ಲಿರುವಂತೆ ಕಾಣುತ್ತಿತ್ತು. ಇದು ಯಾವ ಬಗೆಯ ಶವವೋ ಎಂದು ಅಗಸ್ತ್ಯನು ಆಲೋಚಿಸುತ್ತಿರುವಾಗ, ಒಂದು ವಿಮಾನವು ಆಕಾಶದಿಂದ ಅಲ್ಲಿಯೇ ಕೆಳಗಿಳಿಯಿತು. ಆ ದಿವ್ಯ ವಿಮಾನದಲ್ಲಿ ಒಬ್ಬ ದಿವ್ಯ ಪುರುಷನೂ, ಅವನನ್ನು ಸೇವಿಸುವ ಅನೇಕ ಮಂದಿ ಅಪ್ಸರಸಿಯರೂ ಇದ್ದರು. ಅಪ್ಸರಸಿಯರಲ್ಲಿ ಕೆಲವರು ಹಾಡುತ್ತಿದ್ದರು. ಕೆಲವರು ವಾದ್ಯಗಳನ್ನು ಬಾರಿಸುತ್ತಿದ್ದರು. ಮತ್ತೆ ಕೆಲವರು ನೃತ್ಯ ಮಾಡುತ್ತಿದ್ದರು.

ಸ್ವಲ್ಪ ಹೊತ್ತಾದ ಮೇಲೆ ಆ ದಿವ್ಯ ಪುರುಷನು ವಿಮಾನದಿಂದ ಇಳಿದು ಸರೋವರದ ತೀರದಲ್ಲಿದ್ದ ಶವವನ್ನು ತಿಂದು, ಸರೋವರದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು ಮತ್ತೆ ವಿಮಾನವನ್ನು ಏರಲು ಹೋಗುವಾಗ, ಅದನ್ನೆಲ್ಲ ನೋಡುತ್ತಿದ್ದ ಅಗಸ್ತ್ಯನು ಅವನ ಹತ್ತಿರ ಹೋಗಿ, "ಅಯ್ಯಾ, ಯಾರು ನೀನು? ಇಂತಹ ಅಸಹ್ಯವಾದ ಭೋಜನ ಮಾಡಲು



ಕಾರಣವೇನು ? ಎಂತಹ ಹೀನರು ಕೂಡಾ ಇಂತಹ ಕೆಲಸ ಮಾಡಲಾರರಷ್ಟೆ ? ಇದರಲ್ಲೇನೋ ರಹಸ್ಯ ವಿರಬೇಕೆಂದು ಕೇಳುತ್ತಿದ್ದೇನೆ. ಹೇಳುವಿಯಾ ? " ಎಂದನು.

ಆ ದಿವ್ಯ ಪುರುಷನು ಅಗಸ್ತ್ಯನಿಗೆ ತನ್ನ ಪೂರ್ವ ಕಥೆಯನ್ನು ಹೇಳಿದನು.

ಅವನು ವಿದರ್ಭ ರಾಜನಾದ ಸುದೇವನ ಮಗ ಶ್ವೇತನು. ಸುದೇವನಿಗೆ ಇಬ್ಬರು ಹೆಂಡತಿಯರು. ಇಬ್ಬರಿಗೂ ಒಬ್ಬೊಬ್ಬ ಮಗನು ಹುಟ್ಟಿದ್ದರು. ಅವರಲ್ಲಿ ದೊಡ್ಡವನೇ ಶ್ವೇತನು. ಚಿಕ್ಕವನ ಹೆಸರು ಸುರಥ. ತಂದೆಯ ಅನಂತರ ಶ್ವೇತನು ಬಹಳ ಕಾಲದವರೆಗೆ ರಾಜ್ಯವನ್ನು ಪಾಲಿಸಿ, ಕಡೆಗೆ ಸುರಥನಿಗೆ ಪಟ್ಟಕಟ್ಟಿ, ತಾನು ತಪಸ್ಸು ಮಾಡಲು ಹೋದನು. ದೀರ್ಘಕಾಲ ತಪಸ್ಸು ಮಾಡಿ, ದೇಹವನ್ನು ಬಿಟ್ಟು ಶ್ವೇತನು ಬ್ರಹ್ಮಲೋಕಕ್ಕೆ ಹೋದನು. ಬ್ರಹ್ಮ ಲೋಕದಲ್ಲಿ ಕೂಡಾ ಹಸಿವೆ ನೀರಡಿಕೆಗಳು ಅವನನ್ನು ಬಿಡಲಿಲ್ಲ. ಅದನ್ನು ನೋಡಿ ಅವನು ಗಾಬರಿಬಿದ್ದು ಬ್ರಹ್ಮನ ಬಳಿಗೆ ಹೋಗಿ, ಈ ಬ್ರಹ್ಮ ಲೋಕದಲ್ಲಿ ಕೂಡಾ ತನ್ನನ್ನು ಹಸಿವೆ ನೀರಡಿಕೆಗಳು ಬಾಧಿಸಲು ಕಾರಣವೇನೆಂದು, ತಾನು ಏನು ತಪ್ಪು ಮಾಡಿರುವೆ ನೆಂದು ಕೇಳಿದನು.

ಅದಕ್ಕೆ ಬ್ರಹ್ಮನು "ನೀನು ತಪಸ್ಸು ಮಾಡಿದ ಅಡವಿಯಲ್ಲಿ ಪ್ರಾಣಿಪಕ್ಷಿಗಳಾವುದೂ ಇರಲಿಲ್ಲ. ಆದುದರಿಂದ ನಿನಗೆ ಭೋಜನ ಸಂತುಷ್ಟಿ ಸ್ವಲ್ಪವೂ ಆಗಲಿಲ್ಲ. ಅಲ್ಲದೆ ನೀನು ಯಾವಾಗಲೂ ತಪಸ್ಸಿನಲ್ಲೇ ಇದ್ದು ಅತಿಥಿಗಳಿಗೆ ಭೋಜನವಿಡಲಿಲ್ಲ. ಆದುದ ರಿಂದಲೇ ನಿನ್ನನ್ನು ಹಸಿವೆ ನೀರಡಿಕೆಗಳು ಬಿಡದ ಅಂಟಿಕೊಂಡಿವೆ. ಕಾಡಿನಲ್ಲಿ ನೀನು ಬಿಟ್ಟು ಬಂದ ನಿನ್ನ ದೇಹವನ್ನೇ ತಿಂದು ನಿನ್ನ ಹಸಿವೆ ನೀರಡಿಕೆಗಳನ್ನು ತೀರಿಸಿಕೊಳ್ಳುತ್ತಾ ಇರು. ಸ್ವಲ್ಪ ಕಾಲದವರೆಗೆ ದಿನಾ ನಿನ್ನ ದೇಹ ಹಾಗೆಯೇ ತುಂಬಿಕೊಂಡಿರುತ್ತೆ. ಅಲ್ಲಿಗೆ ಅಗಸ್ತ್ಯನು ಬಂದು ತನ್ನ ಅಪಾರ ಮಹಿಮೆ ಯಿಂದ ನಿನ್ನ ಹಸಿವೆ ನೀರಡಿಕೆಗಳನ್ನು ಹೋಗ ಲಾಡಿಸುತ್ತಾನೆ" ಎಂದು ಹೇಳಿದನು.

ತನ್ನನ್ನು ಮಾತಾಡಿಸಿದವನು ಅಗಸ್ತ್ಯನೇ ಎಂದು ತಿಳಿದ ಕೂಡಲೇ, ಆ ದಿವ್ಯ ಪುರುಷನು "ಸ್ವಾಮಿ, ನನ್ನ ಮೇಲೆ ಅನುಗ್ರಹವಿಟ್ಟು, ಈ ಕಷ್ಟದಿಂದ ನನ್ನನ್ನು ರಕ್ಷಿಸಿರಿ. ಪ್ರತ್ಯುಪಕಾರವಾಗಿ ಈ ದಿವ್ಯ ವಾದ ಕಲ್ಪಾಭರಣವನ್ನು ಸ್ವೀಕರಿಸಿರಿ. ಇದು ಪ್ರತಿದಿನವೂ ಬಂಗಾರವನ್ನೂ, ಧನವನ್ನೂ, ಬಟ್ಟೆ ಗಳನ್ನೂ, ಆಹಾರವನ್ನೂ ಕೊಡುತ್ತಾ ಇರುತ್ತದೆ" ಎಂದನು.

ಅಗಸ್ತ್ಯನು ಅವನು ಕೊಟ್ಟ ಆಭರಣವನ್ನು ಸ್ವೀಕರಿಸಿದ ಕೂಡಲೇ ಶವವು ಶಿಥಿಲವಾಗಿ ಮಣ್ಣಿ ನೊಂದಿಗೆ ಸೇರಿ ಮಾಯವಾಯಿತು. ದಿವ್ಯಪುರುಷ ಶ್ವೇತನು ಸಂತೋಷದಿಂದ ಸ್ವರ್ಗಕ್ಕೆ ಹೊರಟು ಹೋದನು.



ಕೊಂಡಾಗ, ಬೃಹಸ್ಪತಿಯು ಸಹಾಯದಿಂದ ಅಶ್ವಮೇಧ ಮಹಾಯಾಗದ ಮೂಲಕ ಆ ಪಾಪಗಳನ್ನು ಕಳೆದುಕೊಂಡಿದ್ದಾನೆಂಬ ಸಂಗತಿ ನೆನಪಿಗೆ ಬರುತ್ತದೆ. ಅದನ್ನೇ ಮಾಡುವುದು ಒಳ್ಳೆಯದೆಂದು ನನಗೆ ಕಾಣುತ್ತದೆ" ಎಂದು ಲಕ್ಷ್ಮಣನು ಆ ವೃತ್ತಾಂತವನ್ನು ವಿವರಿಸಿ ಹೇಳಿದನು.

ಅದೇನೆಂದರೆ, ಪೂರ್ವಕಾಲದಲ್ಲಿ ವೃತ್ರನೆಂಬ ದೊಡ್ಡ ರಾಕ್ಷಸನೊಬ್ಬನಿದ್ದನು. ಅವನು ರಾಕ್ಷಸನಾದರೂ ಬಹು ದೊಡ್ಡ ಧರ್ಮನಿಷ್ಠನಾಗಿದ್ದನು. ಅಷ್ಟೇ ಜ್ಞಾನಿ ಕೂಡಾ. ಅವನು ಲೋಕಗಳನ್ನು ಬಹು ಪ್ರೀತಿಯಿಂದ ನೋಡಿಕೊಳ್ಳುತ್ತ ಧರ್ಮರೀತಿಯಾಗಿ ಪರಿಪಾಲನೆ ಮಾಡಿಕೊಂಡಿದ್ದನು. ಅವನ ಪಾಲನೆಯಲ್ಲಿ ಕಾಲಕಾಲಕ್ಕೆ ತಪ್ಪದೆ ಮಳೆ ಸುರಿಯುತ್ತಿದ್ದಿತು. ಭೂಮಿಗೆ ಬೇಕಾದುದೆಲ್ಲಾ ದೊರಕುತ್ತಿದ್ದುವು. ಕಷ್ಟಪಟ್ಟು ನೆಲವನ್ನು ಉಳಬೇಕಾಗಿಲ್ಲ. ತನ್ನಂತಾನೇ ಭೂಮಿಯು ಬೆಳೆ ಕೊಡುತ್ತಿದ್ದಿತು. ಆದುದರಿಂದ ಎಲ್ಲಾ ಕಡೆಯೂ ಸುಭಿಕ್ಷವಾಗಿ ಜನರು ಸುಖ ಸಂತೋಷಗಳಿಂದ ತೃಪ್ತರಾಗಿದ್ದರು.

ಹೀಗಿರುವಾಗ ವೃತ್ರನಿಗೆ ತಪಸ್ಸು ಮಾಡಬೇಕೆಂಬ ಸಂಕಲ್ಪ ಉಂಟಾಯಿತು. ಅವನು ತನ್ನ ಹಿರಿಯ ಮಗನಿಗೆ ರಾಜ್ಯಭಾರವನ್ನು ಒಪ್ಪಿಸಿ, ಅರಣ್ಯಕ್ಕೆ ಹೋಗಿ ಅತ್ಯುಗ್ರವಾದ ತಪಸ್ಸಿಗೆ ಪ್ರಾರಂಭಿಸಿದನು. ಅವನ ತಪಸ್ಸನ್ನು ನೋಡಿ ದೇವೇಂದ್ರನು ಹೆದರಿ, ವಿಷ್ಣುಮೂರ್ತಿಯ ಬಳಿಗೆ ಹೋಗಿ, "ಈಗಾಗಲೇ ಮೂರು ಲೋಕಗಳನ್ನೂ ಜಯಿಸಿದ ವೃತ್ರನು ಈಗ ದೊಡ್ಡ ತಪಸ್ಸಿನಲ್ಲಿದ್ದಾನೆ. ಈ ತಪಸ್ಸು ಮುಗಿಯಿತೆಂದರೆ ಮತ್ತೆ ಯಾವ ಕಾಲಕ್ಕೂ ನಾನು ಅವನನ್ನು ಜಯಿಸಲು ಸಾಧ್ಯವಾಗದು. ಆದುದರಿಂದ ಆ ವೃತ್ರನನ್ನು ಕಡೆ ಮುಟ್ಟಿಸಿದ ಹೊರತು ನನಗೂ ದೇವತೆಗಳಿಗೂ ಕ್ಷೇಮವಿಲ್ಲ. ರಾಕ್ಷಸರ ಬುದ್ಧಿ ಯಾವಾಗ ಹೇಗೆ ಮಾರ್ಪಡುವುದೋ ಹೇಳಲಾರೆವು. ದೇವರದೇವಾ! ಎಲ್ಲಾ ತಿಳಿದಿರುವ ನಿನಗೆ ಇದಕ್ಕಿಂತ ಹೆಚ್ಚು ಹೇಳಲಾರೆವು. ನಿನ್ನ ಚಿತ್ತ! ನಿನ್ನ ಅಪ್ಪಣೆಯಂತೆ ನಡೆದುಕೊಳ್ಳುತ್ತೇವೆ" ಎಂದು ಪ್ರಾರ್ಥಿಸಿಕೊಂಡನು.

ಇಂದ್ರನ ಮೊರೆಯನ್ನು ಕೇಳಿ ವಿಷ್ಣುಮೂರ್ತಿ, "ಆ ವೃತ್ರನು ಮಹಾತ್ಮನಾಗಿ ನನಗೆ ಮಿತ್ರನಾಗಿಯೂ ಇದ್ದಾನೆ. ಆದುದರಿಂದ ನಾನು ಸಂಹರಿಸಲು ಸಾಧ್ಯವಿಲ್ಲ. ಆದರೆ ನಿನ್ನ ಅಪೇಕ್ಷೆ ಕೂಡಾ ತೆಗೆದು ಹಾಕುವಂತಹುದಲ್ಲ. ಆದುದರಿಂದ ವೃತ್ರಾಸುರನು ಸಾಯುವಂತಹ ಒಂದು ಉಪಾಯವನ್ನು ಹೇಳುತ್ತೇನೆ. ನನ್ನ ಶಕ್ತಿಯನ್ನು ಮೂರು ಭಾಗಗಳಾಗಿ ವಿಂಗಡಿಸಿ, ಒಂದು ಭಾಗವನ್ನು ನಿನ್ನಲ್ಲಿಯೂ, ಮತ್ತೊಂದನ್ನು ನಿನ್ನ ವಜ್ರಾಯುಧದಲ್ಲಿಯೂ, ಮೂರನೆಯದನ್ನು ಭೂಮಿಯಲ್ಲಿಯೂ ಪ್ರವೇಶಗೊಳಿಸುತ್ತೇನೆ. ಆಗ ನೀನು ವೃತ್ರನನ್ನು ಸುಲಭವಾಗಿ ಸಂಹರಿಸಿ ಬಿಡುವಿ" ಎಂದನು.

ಈ ಮಾತನ್ನು ಕೇಳಿ ಇಂದ್ರನೂ, ದೇವತೆಗಳೂ ಸಂತೋಷಿಸಿದರು. "ನಿನ್ನ ಚಿತ್ತ ದೇವಾ!" ಎಂದು ಅವರೆಲ್ಲರೂ, ಅಲ್ಲಿಂದ ಹೊರಟು, ವೃತ್ರನು ತಪಸ್ಸು ಮಾಡುವ ದೇದೀಪ್ಯಮಾನವಾದ ವನದೊಳಗೆ ಹೋದರು.

ವೃತ್ರನು ತಪಸ್ಸಿನಲ್ಲಿ ಮೂರು ಲೋಕಗಳು ಸುಟ್ಟು ಹೋಗುವಂತೆ ತಪಸ್ಸಿನ ತೀವ್ರತೆಯಲ್ಲಿ ಜ್ವಲಿಸಿಕೊಂಡಿದ್ದನು. ಅವನನ್ನು ನೋಡಿದ ಕೂಡಲೇ ದೇವತೆಗಳಿಗೆ ಭಯದಿಂದ ಎದೆ ಡವಡವಿಸಿತು. ಅಷ್ಟರಲ್ಲಿ ವಿಷ್ಣು ಕೊಟ್ಟ ವಿಶೇಷ ಶಕ್ತಿಗಳ ನೆನಪಾದುದರಿಂದ ಇಂದ್ರನು ಎಲ್ಲಿಲ್ಲದಷ್ಟು ಧೈರ್ಯವನ್ನು ತಂದುಕೊಂಡು ಬಲವಾಗಿ ನಿಂತು, ವಜ್ರಾಯುಧವನ್ನು ಎರಡು ಕೈಗಳಿಂದಲೂ ಎತ್ತಿ ವೃತ್ರನ ತಲೆಯ ಮೇಲೆ ಹೊಡೆದನು. ಆ ಏಟಿಗೆ ಅವನು ಕುಳಿತಲ್ಲಿ ಭೂಮಿಯೂ ತಗ್ಗಿ, ಅವನನ್ನು ಅಮುಕಿಕೊಂಡಿತು.

ಹಾಗೆ ಬಿದ್ದ ವೃತ್ರನು ಮತ್ತೆ ಏಳಲಿಲ್ಲ. ಆದರೆ ಆ ಮಹಾ ತಪಸ್ವಿಯಾದ ವೃತ್ರನನ್ನು ಹತ್ಯ ಮಾಡಿದುದರಿಂದ ಬ್ರಹ್ಮಹತ್ಯಾ ಪಾತಕವು ಇಂದ್ರನನ್ನು ಮುತ್ತಿಕೊಂಡಿತು. ಇಂದ್ರನು ಎತ್ತಲೂ ಕದಲಲಾಗದೆ ನಡುಗುತ್ತಾ ನಿಂತನು.

ದೇವತೆಗಳೆಲ್ಲಾ ವಿಷ್ಣುವಿನ ಬಳಿಗೆ ಹೋಗಿ, ಇಂದ್ರನನ್ನು ಹಿಡಿದ ಬ್ರಹ್ಮಹತ್ಯಾ ಪಾತಕವು ಬಿಟ್ಟು ಹೋಗುವ ಉಪಾಯ ಹೇಳುವಂತೆ ಪ್ರಾರ್ಥಿಸಿಕೊಂಡರು.

"ಇಂದ್ರನು ಅಶ್ವಮೇಧ ಯಾಗ ಮಾಡಲಿ. ಬ್ರಹ್ಮಹತ್ಯವು ಅವನನ್ನು ಬಿಟ್ಟು ಹೋಗಿ ಬಿಡುತ್ತದೆ. ಅದರೊಂದಿಗೆ ಇತರ ಪಾಪಗಳೂ ಕೂಡಾ ನಶಿಸಿ ಹೋಗುತ್ತವೆ" ಎಂದನು ವಿಷ್ಣು.

ಈ ಮಾತನ್ನು ಕೇಳಿ ದೇವತೆಗಳು ಸಂತೋಷಪಟ್ಟು, ಬೃಹಸ್ಪತಿ ಮೊದಲಾದವರೊಂದಿಗೆ ಇಂದ್ರನಿರುವ ಸ್ಥಳಕ್ಕೆ ಹೋದರು. ವಿಷ್ಣುಮೂರ್ತಿಯ



ಮಾತನ್ನು ಅವನಿಗೆ ತಿಳಿಸಿದರು. ಸಂಕಲ್ಪಮಾತ್ರದಿಂದಲೇ ಬ್ರಹ್ಮಹತ್ಯಾ ಪಾತಕವು ದೂರಹೋಗಿ ನಿಂತಿತು. ಆಮೇಲೆ ಬೃಹಸ್ಪತಿಯ ಸಹಾಯದಿಂದ ಇಂದ್ರಾದಿ ದೇವತೆಗಳು ಅಶ್ವಮೇಧ ಯಾಗವನ್ನು ಶ್ರದ್ಧೆಯಿಂದ ಮಾಡಿದರು. ಬ್ರಹ್ಮಹತ್ಯಾ ಪಾತಕವು ತೊಲಗಿಯೇ ಹೋಯಿತು. ಇಂದ್ರನು ಮೊದಲಿನಂತಾದನು.

ಲಕ್ಷ್ಮಣನು ಈ ಕಥೆಯನ್ನು ಹೇಳಿದ ಮೇಲೆ, ರಾಮನು ಅಶ್ವಮೇಧದ ಮಹಿಮೆಯನ್ನು ತಿಳಿಸುವ ಮತ್ತೊಂದು ಕಥೆಯನ್ನು ಭರತ ಲಕ್ಷ್ಮಣರ ಮುಂದೆ ಹೇಳಿದನು. ಆ ಕಥೆ ಹೀಗಿದೆ:

ಪೂರ್ವಕಾಲದಲ್ಲಿ ಕರ್ದಮ ಪ್ರಜಾಪತಿಯ ಮಗನಾದ ಇಲರಾಜನು ಬಾಹ್ಲೀಕ ದೇಶವನ್ನು ಪರಿಪಾಲನೆ ಮಾಡಿಕೊಂಡಿದ್ದನು. ಅವನೆಂದರೆ ದೇವತೆಗಳಿಗೂ, ರಾಕ್ಷಸರಿಗೂ, ನಾಗರಿಗೂ, ಯಕ್ಷರಿಗೂ, ಗಂಧರ್ವರಿಗೂ ಬಹಳ ಗೌರವವಿದ್ದಿತು.



ಒಂದು ಚೈತ್ರ ಮಾಸದಲ್ಲಿ ಇಲ ಮಹಾರಾಜನು ತನ್ನ ಪರಿವಾರವನ್ನು ಸಾಗಿಸಿಕೊಂಡು ಬೇಟೆಯಾಡಲು ಅರಣ್ಯಕ್ಕೆ ಹೋದನು. ಎಷ್ಟು ಸಾವಿರ ಮೃಗಗಳನ್ನು ಕೊಂದು ರಾಶಿಹಾಕಿದರೂ ಅವನಿಗೆ ಬೇಟೆಯ ಮಯಕ ತೀರಲಿಲ್ಲ. ಆದುದರಿಂದ ಅವನು ಮೇಲೆ ಮೇಲೆ ಉಕ್ಕುವ ಉತ್ಸಾಹದಲ್ಲಿ ಬೇಟೆಯಾಡುತ್ತಾ, ಮೃಗಗಳನ್ನು ಓಡಿಸಿಕೊಂಡು ಎಲ್ಲಿಗೆ ಹೋಗುವೆನೆಂಬುದನ್ನು ಕೂಡಾ ಮರೆತನು. ಹಾಗೆಯೇ ಹೋಗಿ ಹೋಗಿ ಕುಮಾರಸ್ವಾಮಿ ಹುಟ್ಟಿದ ಸ್ಥಳಕ್ಕೆ ಮುಟ್ಟಿದನು.

ಅಲ್ಲಿ ಪಾರ್ವತೀ ಪರಮೇಶ್ವರರು ತಮ್ಮ ಅನುಚರರೊಂದಿಗೆ ವಿಹರಿಸಿಕೊಂಡಿದ್ದರು. ಅವರ ಮಹಿಮೆಗಳು ಆ ಪ್ರದೇಶದಲ್ಲಿ ಹರಡಿದ್ದುವು.

ಆ ಪರ್ವತ ಪ್ರದೇಶದಲ್ಲಿರುವ ವಿಶೇಷವೇನೆಂದರೆ, ಅಲ್ಲಿರುವ ಪಕ್ಷಿಗಳೂ, ಮರಮಟ್ಟುಗಳೂ ಮೃಗಗಳೂ ಸಹ ಹೆಣ್ಣುಗಳೇ.

ಅಲ್ಲಿಗೆ ಮುಟ್ಟಿದ ಕೂಡಲೇ ಇಲನೂ, ಅವನ ಭೃತ್ಯರೂ ಸ್ತ್ರೀಯರಾಗಿ ಮಾರ್ಪಟ್ಟರು. ತನ್ನಲ್ಲಿ ಉಂಟಾದ ಮಾರ್ಪಾಡನ್ನು ನೋಡಿ ಇಲನಿಗೆ ಭಯವೂ ಸಂಕಟವೂ ಉಂಟಾಯಿತು. ಅವನು ಶಿವನ ಹತ್ತಿರ ಹೋಗಿ ಸ್ತೋತ್ರಮಾಡಿ ರಕ್ಷಿಸುವಂತೆ ದೀನನಾಗಿ ಬೇಡಿಕೊಂಡನು. ಅವನ ಪ್ರಾರ್ಥನೆಯನ್ನು ಪಾರ್ವತಿ ಗಮನಿಸಿದಳು.

ಪಾರ್ವತಿ ಅವನ ಮೇಲೆ ಕರುಣೆಗೊಂಡು ಶಿವನ ಅನುಜ್ಞೆ ಪಡೆದು, ಅವನು ಒಂದು ತಿಂಗಳು ಸ್ತ್ರೀಯಾಗಿಯೂ, ಮತ್ತೊಂದು ತಿಂಗಳು ಪುರುಷನಾಗಿಯೂ ಇರುವ ಹಾಗೆ, ಸ್ತ್ರೀಯಾಗಿರುವಾಗ ನಡೆದುದಾವುದೂ ಪುರುಷನಾಗಿರುವಾಗ ನೆನಪಿಗೆ ಬಾರದಂತೆ ವರವನ್ನು ಕೊಟ್ಟಳು.

ಹೀಗೆ ಇಲನು ಇಲಾಳಾದನು. ಅವನ ಹಾಗೆಯೇ ಸ್ತ್ರೀಯರಾಗಿ ಮಾರ್ಪಟ್ಟ ಭೃತ್ಯ ಸ್ತ್ರೀಯರೊಂದಿಗೆ ಆ ಅರಣ್ಯದಲ್ಲಿ ತಿರುಗಿಕೊಂಡಿದ್ದನು. ಅವರೆಲ್ಲರ ನಗುಗಳೂ ನಡೆದಾಟ, ಓಡಾಟಗಳೂ ಕೂಗಾಟಗಳೂ ಅಲ್ಲಿ ಪ್ರತಿಧ್ವನಿಸಿದುವು.

ಅವರೆಲ್ಲ ಸ್ತ್ರೀಯರಾಗಿ ಮಾರ್ಪಟ್ಟ ಬೆಟ್ಟದ ಹತ್ತಿರ ಒಂದು ಸರೋವರವಿದ್ದಿತು. ಅಲ್ಲಿ ಚಂದ್ರನ ಮಗನಾದ ಬುಧನು ಆಶ್ರಮ ಕಲ್ಪಿಸಿಕೊಂಡು ತಪಸ್ಸಿನಲ್ಲಿದ್ದನು. ಅವನು ಒಳ್ಳೆಯ ಯೌವನದಲ್ಲಿ ತುಂಬಾ ಆಕರ್ಷಣೀಯ ರೂಪದವನಾಗಿದ್ದನು. ಆ ಪ್ರದೇಶವೆಲ್ಲವೂ ಬಹಳ ಸುಂದರವಾಗಿತ್ತು.

ಇಲಾ ಮತ್ತು ಅವನೊಂದಿಗಿದ್ದ ಸ್ತ್ರೀಯರೂ ಸರೋವರದಲ್ಲಿಳಿದು ಜಲಕ್ರೀಡೆಯಾಡುತ್ತ ಅಲ್ಲ ಕಲ್ಲೋಲವೆಬ್ಬಿಸಿಕೊಂಡಿದ್ದರು. ಬುಧನು ಅವರನ್ನು ನೋಡಿ ಇಲಾಳ ಸೌಂದರ್ಯದಿಂದ ಆಕರ್ಷಿತನಾದನು. ಇಷ್ಟೊಂದು ಸುಂದರಿಯಾದವಳು ಮೂರು ಲೋಕದಲ್ಲಿಯೂ ಇನ್ನೊಬ್ಬಳಿಲ್ಲವೆಂದು ಅವನಿಗೆ ತೋರಿತು. ಇಲಾಳೊಂದಿಗಿದ್ದ ಕೆಲವು

ಸ್ತ್ರೀಯರನ್ನು ಅವನು ಆಶ್ರಮದೊಳಗೆ ಕರೆದು "ಅವಳು ಯಾರು ? ಈ ಪ್ರಾಂತಕ್ಕೆ ಏನು ಕೆಲಸದ ಮೇಲೆ ಬಂದಳು ? ನೀವೆಲ್ಲಾ ಅವಳ ಸೇವಿಕೆಯರ ಹಾಗೆ ಕಾಣುತ್ತದೆ. ನಿಜ ಸಂಗತಿ ಹೇಳಿರಿ" ಎಂದು ಕೇಳಿದನು.

"ಅಯ್ಯಾ, ಅವಳೇ ನಮ್ಮ ಯಜಮಾನಳು. ನಮ್ಮನ್ನು ಕರೆದುಕೊಂಡು ಬಂದು ಇಲ್ಲಿ ತಿರುಗಾಡಿ ಕೊಂಡಿದ್ದಾಳೆ. ಅರಣ್ಯವಿಡೀ ತಿರುಗಿ ನೋಡಲು ಬಂದಿದ್ದಾಳೆ. ಅಷ್ಟೇ ನಮಗೆ ಗೊತ್ತು. ಹೆಚ್ಚಿನ ಸಂಗತಿಗಳಾವುದೂ ನಮಗೆ ತಿಳಿಯದು" ಎಂದರು ಆ ಸ್ತ್ರೀಯರು.

"ನೀವೆಲ್ಲರೂ ಈ ಆಶ್ರಮದಲ್ಲಿಯೇ ಕಂದ ಮೂಲಗಳನ್ನು ತಿಂದುಕೊಂಡು ಇರಬಹುದು. ಸುಮ್ಮನೆ ಕಾಡು ತಿರುಗುವುದರಲ್ಲಿ ಅರ್ಥವಿಲ್ಲ. ಯಾವ ಪ್ರಯೋಜನವೂ ಇಲ್ಲ. ಇಲ್ಲಿರುವ ಕಿಂಪುರುಷರು ನಿಮಗೆ ಗಂಡಂದಿರಾಗುತ್ತಾರೆ. ನೀವೆಲ್ಲಾ ಇಲ್ಲೇ ಸುಖವಾಗಿದ್ದುಬಿಡಿರಿ" ಎಂದು ಬುಧನು ಅವರೊಂದಿಗೆ ಹೇಳಿದನು.

ಭೃತ್ಯ ಸ್ತ್ರೀಯರು ಏನೂ ಹೇಳದೆ ಅಲ್ಲಿಂದ ಹೊರಟುಹೋದರು. ಹೋದವರು ಮತ್ತೆ ಅಲ್ಲಿಗೆ ಹಿಂದಿರುಗಲಿಲ್ಲ.

ಆಮೇಲೆ ಬುಧನು ಇಲಾಳೊಂದಿಗೆ, "ನಾನು ಚಂದ್ರನ ಮಗನಾದ ಬುಧನು. ನಿನ್ನ ಪರಿಸ್ಥಿತಿ ಯನ್ನು ನೋಡಿ ನನಗೆ ನಿನ್ನ ಮೇಲೆ ಆದರಣೆ ಬರುತ್ತಿದೆ. ನನ್ನನ್ನು ಭಕ್ತಿ ಸ್ನೇಹಗಳಿಂದ ನೋಡಿ ಕೊಂಡರೆ ನೀನಿಲ್ಲಿ ಸುಖವಾಗಿರಬಹುದು" ಎಂದನು.

"ನಿಮ್ಮಿಷ್ಟ" ಎಂದಳು ಇಲಾ.

ಇಬ್ಬರೂ ಮಹಾ ಸಂತೋಷದಿಂದ ಆ ತಿಂಗಳನ್ನು ಅಲ್ಲಿ ಕಳೆದರು. ಎರಡನೇ ತಿಂಗಳಿನ ಮೊದಲನೇ ದಿನ ಬೆಳಿಗ್ಗೆ ನಿದ್ದೆಯಿಂದೇಳುವಾಗ ಇಲಾ ಇಲ ಮಹಾರಾಜನಾಗಿ ಎದ್ದನು.



ಅವನಿಗೆ ನಡೆದುದಾವುದೂ ನೆನಪಿನಲ್ಲಿಲ್ಲ. ಆಗ ಬುಧನು ಸರೋವರದಲ್ಲಿ ಕೈಗಳನ್ನು ಮೇಲೆತ್ತಿ ಧ್ಯಾನಮಗ್ನನಾಗಿದ್ದನು. ಇಲನು ಅವನನ್ನು ನೋಡಿ, "ಅಯ್ಯಾ, ನಾನು ನನ್ನ ಸೈನಿಕರೊಂದಿಗೆ ಈ ಪರ್ವತ ಪ್ರಾಂತಕ್ಕೆ ಬೇಟೆಗಾಗಿ ಬಂದೆನು. ಅವರೆಲ್ಲಾ ಎತ್ತ ಹೋದರೋ ತಿಳಿಯುವುದಿಲ್ಲ. ನೀವು ನೋಡಿ ದಿರಾ ? ಅವರ ಸಂಗತಿ ನಿಮಗೇನಾದರೂ ಗೊತ್ತಿ ದೆಯೇ ?" ಎಂದು ಕೇಳಿದನು.

"ರಾಜಾ, ಕಲ್ಲಿನ ಮಳೆ ಸುರಿದುದರಿಂದ ನಿನ್ನ ಪರಿವಾರದವರೆಲ್ಲಾ ನಾಶವಾದರು. ನೀನು ಮಾತ್ರ ಈ ಆಶ್ರಮದಲ್ಲಿ ತಲೆ ತಪ್ಪಿಸಿಕೊಂಡಿರುವಿ. ಚಿಂತಿಸ ಬೇಡ. ಇಲ್ಲಿ ನೀನು ಸುಖವಾಗಿರಬಹುದು" ಎಂದನು ಬುಧ.

ತನ್ನ ಅನುಚರರೆಲ್ಲಾ ತೀರಿಹೋದುದನ್ನು ತಿಳಿದು ಇಲನು ಬಹಳ ಚಿಂತಿಸುತ್ತ, "ಇನ್ನು ನನಗೆ ರಾಜ್ಯ ವಾಳಬೇಕೆಂಬ ಆಶೆ ಇಲ್ಲ. ನೀವು ಅನುಮತಿ



ಕೊಟ್ಟರೆ ನಾನು ನನ್ನ ಹಿರಿಯ ಮಗನಾದ ಶತ ಬಿಂದುವಿಗೆ ಪಟ್ಟಗಟ್ಟಿ ಬೇಗನೇ ಹಿಂದಿರುಗಿ ಬರುತ್ತೇನೆ" ಎಂದನು.

"ಇಲ ಮಹಾರಾಜಾ, ಹಾಗೇಕೆ ಕಳವಳಪಡುವಿ? ಒಂದು ವರ್ಷ ಇಲ್ಲಿರು. ನಿನಗೆ ಒಳ್ಳೆಯದಾಗುವಂತೆ ಮಾಡುತ್ತೇನೆ" ಎಂದನು ಬುಧ.

ಇಲನು ಅದಕ್ಕೆ ಒಪ್ಪಿ ಅಲ್ಲೇ ಇದ್ದನು.

ಒಂದು ತಿಂಗಳು ಸ್ತ್ರೀಯಾಗಿದ್ದು ಮತ್ತೊಂದು ತಿಂಗಳು ಪುರುಷನಾಗಿರುತ್ತ ಇಲನು, ತಾನು ಸ್ತ್ರೀಯಾಗಿರುವ ಕಾಲದಲ್ಲಿ ಗರ್ಭಧರಿಸಿ ಒಬ್ಬ ಮಗನನ್ನು ಹೆತ್ತನು.

ಅನಂತರ ಬುಧನು, ಸಂವರ್ತ, ಚ್ಯವನ, ಪ್ರಮೋದನ, ದುರ್ವಾಸ ಮೊದಲಾದ ಇತರ ಋಷಿಗಳನ್ನು ಕರೆಯಿಸಿ, ಅವರಿಗೆ ಇಲನನ್ನು ಪರಿಚಯ ಮಾಡಿಸಿ, ಅವನ ಪರಿಸ್ಥಿತಿ ಮೊದಲಿನಂತಾಗಲು ಏನಾದರೂ ದಾರಿ ಹೇಳಬೇಕೆಂದು ಕೇಳಿಕೊಂಡನು.

ಆ ಸಮಯದಲ್ಲಿಯೇ ಇಲನ ತಂದೆಯಾದ ಕರ್ದಮನು, ತನ್ನ ಮಗನಿಗೆ ಒಳ್ಳೆಯದಾಗಬೇಕಾದರೆ ಅಶ್ವಮೇಧ ಯಾಗ ಮಾಡುವುದೊಂದೇ ಮಾರ್ಗವೆಂದು ಹೇಳಿದನು. ಎಲ್ಲಾ ಋಷಿಗಳೂ ನಿಜ ನಿಜವೆಂದರು.

ಅನಂತರ ಅವರೆಲ್ಲಾ ಸೇರಿ ಅಶ್ವಮೇಧ ಯಾಗ ಮಾಡಿ, ಇಲನಿಗೆ ಸ್ತ್ರೀತ್ವವು ಬಾರದ ಹಾಗೆ ಮಾಡಿದರು. ಆ ಯಜ್ಞವು ಪೂರ್ತಿಯಾಗುವ ಕಾಲಕ್ಕೆ ಸಾಕ್ಷಾತ್ ಶಿವನೇ ಪ್ರತ್ಯಕ್ಷನಾಗಿ ಇಲ ಮಹಾರಾಜನನ್ನು ಅನುಗ್ರಹಿಸಿದನು.

ಇಲನು ಮತ್ತೆ ಬಾಹ್ಲೀಕ ದೇಶಕ್ಕೆ ತಿರುಗಿ ಹೋಗಲಿಲ್ಲ. ಮಧ್ಯದೇಶದೊಳಗಿನ ಪ್ರತಿಷ್ಠಾನಪುರವನ್ನಾಳುತ್ತ ಅಲ್ಲಿಯೇ ಇದ್ದುಬಿಟ್ಟನು. ಇಲ ಮಹಾರಾಜನ ಅನಂತರ ಬುಧನಿಗೆ ಹುಟ್ಟಿದ ಪುರೂರವನು ಪ್ರತಿಷ್ಠಾನಪುರದ ರಾಜನಾದನು.

ರಾಮನು ಈ ಕಥೆಯನ್ನು ತನ್ನ ತಮ್ಮಂದಿರಿಗೆ ಹೇಳಿ, ಲಕ್ಷ್ಮಣನನ್ನು ಕಳುಹಿಸಿ ತನ್ನ ಪುರೋಹಿತರಾದ ವಸಿಷ್ಠ, ವಾಮದೇವ, ಜಾಬಾಲಿ ಮೊದಲಾದವರನ್ನು ಬರಮಾಡಿ, ತಾನು ಅಶ್ವಮೇಧ ಯಾಗಕ್ಕೆ ತಲೆಹಾಕಿದ ಸಂಗತಿಯನ್ನು ಅವರೊಡನೆ ಹೇಳಿದನು. ಆ ಮಾತು ಕೇಳಿ ಅವರಿಗೆಲ್ಲಾ ಬಹಳ ಸಂತೋಷವಾಯಿತು.

ಅಶ್ವಮೇಧ ಯಾಗದ ಪ್ರಯತ್ನಗಳು ಪ್ರಾರಂಭವಾದುವು. ಅದಕ್ಕೆ ಅಗತ್ಯವಾದ ಸಾಧನ ಸನ್ನಾಹಗಳು ಬೇಗ ಬೇಗನೇ ಬಂದು ಸೇರತೊಡಗಿದುವು.

ಕಿಷ್ಕಿಂಧೆಯಲ್ಲಿರುವ ಸುಗ್ರೀವನಿಗೂ, ಲಂಕೆಯಲ್ಲಿರುವ ವಿಭೀಷಣನಿಗೂ ಅಶ್ವಮೇಧ ಯಾಗಕ್ಕೆ ಬಂದು ಭಾಗವಹಿಸಬೇಕೆಂದು ದೂತರ ಮೂಲಕ ಸುದ್ದಿ ಹೋಯಿತು. ಪ್ರತ್ಯೇಕವಾಗಿ ಆಹ್ವಾನಗಳೂ ಹೋದುವು. ರಾಮನಿಗೆ ಶುಭ ಕೋರುವವರೆಲ್ಲರಿಗೂ ಓಸಗೆಗಳು ಹೋದುವು. ನಾನಾ ದೇಶಗಳ

ಬ್ರಾಹ್ಮಣರೂ, ಗಾಯಕರೂ ಸಕುಟುಂಬಿಗಳಾಗಿ ಬರತೊಡಗಿದರು. ಋಷಿಗಳೂ ಬರುತ್ತಿದ್ದರು. ನಟರೂ, ನಾಟ್ಯಕಾರರೂ, ತಾಳಮೇಳಗಳವರೂ ಅಯೋಧ್ಯೆಗೆ ಬರುತ್ತಿದ್ದರು.

ನೈಮಿಕವನದ ಗೋಮತಿ ನದೀ ತೀರದಲ್ಲಿ ಬ್ರಹ್ಮಾಂಡವಾದ ಯಜ್ಞಶಾಲೆ ನಿರ್ಮಿಸಲ್ಪಟ್ಟಿತು. ಸಾವಿರಾರು ಗಾಡಿಗಳಲ್ಲಿ ಧಾನ್ಯೋಪಧಾನ್ಯಗಳೂ, ಸಂಬಾರ ಜೀನಸುಗಳೂ, ಗಂಧ, ಮಕರಂದಗಳೂ, ಕೋಟಾನುಕೋಟಿ ಬಂಗಾರಗಳೂ, ಬಂದು ಬಂದು ಸೇರುತ್ತಿದ್ದುವು. ಅಡಿಗೆಯವರೂ, ಶಿಲ್ಪಿಗಳೂ ಬಂದರು. ರಾಮನ ಅಂತಃಪುರದಿಂದ ಅವನ ತಾಯಿಯರೂ, ಬಂಗಾರದ ಸೀತಾ ಮೂರ್ತಿಯೂ, ಭರತನೊಂದಿಗೆ ಬಂದು ಯಜ್ಞಶಾಲೆಯ ಬಿಡದಿಯ ಮಂಟಪದಲ್ಲಿ ಸೇರಿದರು. ಆಹ್ವಾನಿತರಾಗಿ ಎಲ್ಲಾ ಸೌಕರ್ಯಗಳಿರುವ ಬೇರೆ ಬೇರೆ ಬಿಡದಿಗಳನ್ನು ಅಲ್ಲಲ್ಲಿ ಕಟ್ಟಿಸಲಾಗಿತ್ತು.

ಈ ಏರ್ಪಾಡುಗಳೆಲ್ಲಾ ಆಗುವುದರೊಳಗೆ ರಾಮನು ಒಂದು ಕಪ್ಪು ಕುದುರೆಯನ್ನು ಬಿಟ್ಟು ಅದರ ಹಿಂದೆ ಋತ್ವಿಜರನ್ನೂ, ಲಕ್ಷ್ಮಣನನ್ನೂ ಕಳುಹಿಸಿದನು.

ಯಜ್ಞವನ್ನು ನೋಡಲು ಬಂದ ರಾಜರುಗಳು ರಾಮನಿಗೆ ತಮ್ಮಲ್ಲಿರುವ ಬೆಲೆ ಬಾಳುವಂತಹ ಕಾಣಿಕೆ ವಸ್ತುಗಳನ್ನು ತಂದು ಸಮರ್ಪಿಸಿದರು. ಅವರ ವಸತಿ ಸೌಕರ್ಯಗಳನ್ನು ಭರತ ಶತ್ರುಘ್ನರು ನೋಡಿಕೊಳ್ಳುತ್ತಿದ್ದರು.

ಬ್ರಾಹ್ಮಣರ ಸೌಕರ್ಯಗಳನ್ನು ಸುಗ್ರೀವನ ವಾನರರೂ, ಋಷಿಗಳ ಸೌಕರ್ಯಗಳನ್ನು ವಿಭೀಷಣನ ರಾಕ್ಷಸರೂ ವಹಿಸಿಕೊಂಡು ಗಮನಿಸುತ್ತಿದ್ದರು.

ಯಜ್ಞವು ಬಹಳ ಜಯಪ್ರದವಾಗಿ ನಡೆಯುತ್ತಿತ್ತು. ಎಲ್ಲಿಯೂ ಯಾರಿಗೂ ಯಾವ ಕೊರತೆಯೂ ಬಂತೆಂಬ ಮಾತು ಹೊರಡಲಿಲ್ಲ. ಭೋಜನ ವೇಳೆಯಲ್ಲಿ ಯಾರೂ ಬಾಯಿಬಿಟ್ಟು ಕೇಳದೆಯೇ ಅವರವರಿಗೆ ಬೇಕಾದ ಪದಾರ್ಥಗಳು ಬಡಿಸಲ್ಪಡುತ್ತಿದ್ದುವು. ಬಂಗಾರವೇನು, ಧನವೇನು, ರತ್ನಗಳೇನು, ಬಟ್ಟೆಗಳೇನು, ಯಾರಿಗೆ ಏನು ಬೇಕಾದರೂ ಕೊಡಲ್ಪಟ್ಟಿತು. ಆ ವಸ್ತುಗಳನ್ನೆಲ್ಲಾ ದೊಡ್ಡ ದೊಡ್ಡ ರಾಶಿಗಳಾಗಿ ಹಾಕಿ ರಾತ್ರೀ ಹಗಲೂ ಕೇಳಿದವರಿಗೆ ಕೊಡುತ್ತಲೇ ಬಂದರು. ಇಂತಹ ಯಜ್ಞವನ್ನು ಇಂದ್ರನೂ, ಕುಬೇರನೂ, ಯಮನೂ ಕೂಡಾ ಮಾಡಿರಲಾರರೆಂದು ಜನರು ಹೇಳಿಕೊಳ್ಳುತ್ತಿದ್ದರು. ವಾನರರಿಗೂ ರಾಕ್ಷಸರಿಗೂ ಕೈ ಮೈ ತುಂಬಾ ಕೆಲಸಗಳೇ. ಯಾಚಕರು ಕೇಳುವುದನ್ನೆಲ್ಲಾ ಅವರೇ ಕೊಡುತ್ತಿದ್ದರು. ಹೀಗೆ ಒಂದು ವರ್ಷದವರೆಗೂ ನಡೆದು ಯಜ್ಞವು ಮುಗಿಯಿತು.






ರಾಮನು ಮಾಡಿದ ಅತ್ಯದ್ಭುತವಾದ ಯಜ್ಞ ಸಮಾರಂಭಕ್ಕೆ ವಾಲ್ಮೀಕಿ, ತನ್ನ ಶಿಷ್ಯರೊಂದಿಗೆ ಬಂದು, ಋಷಿ ವಾಟಿಕಾ ವಿಭಾಗದಲ್ಲಿ ತನಗಾಗಿ ಪ್ರತ್ಯೇಕವಾಗಿ ನಿರ್ಮಿಸಲ್ಪಟ್ಟಿದ್ದ ಪರ್ಣಶಾಲೆಯಲ್ಲಿ ತಂಗಿದ್ದನು. ಆದು ತಪೋವನದ ಆಶ್ರಮದ ಹಾಗೆಯೇ ಇದ್ದಿತು.

ಅಲ್ಲಿ ಆತನ ವಿಶೇಷತೆ ಏನೆಂದರೆ, ಅವನು ತಾನು ರಚಿಸಿದ ರಾಮಾಯಣವನ್ನು ಶಿಷ್ಯರ ಮೂಲಕ ಯಜ್ಞ ಪ್ರದೇಶಗಳಲ್ಲಿ ಎಲ್ಲಿ ಅವಕಾಶವೋ ಅಲ್ಲೆಲ್ಲಾ ಹಾಡಿಸಲು ಅನುಮತಿ ಕೊಟ್ಟಿದ್ದನು. ಹಾಗೆ ಹಾಡುವವರಲ್ಲಿ ಮುಖ್ಯರಾದವರು ಕುಶಲವರು. ವಾಲ್ಮೀಕಿ ಕುಶಲವರೊಂದಿಗೆ, ನೀವು ಯಾರೆಂದು ಯಾರಾದರೂ ಕೇಳಿದರೆ ವಾಲ್ಮೀಕಿಯ ಶಿಷ್ಯರೆಂದು ಮಾತ್ರವೇ ಹೇಳಿರಿ, ಬೇರೆ ಯಾವ ಪ್ರಶ್ನೆಗಳಿಗೂ ಅವಕಾಶವಾಗುವಂತೆ ಮಾತಾಡಬೇಡಿರಿ ಎಂದು ಆದೇಶಿಸಿದ್ದನು. ಯಾರಾದರೂ ಹಣ ಕೊಟ್ಟರೆ ತೆಗೆದುಕೊಳ್ಳಬೇಡಿರೆಂದೂ, ರಾಮನು ಕರೆದರೆ ಅವನ ಬಳಿಗೆ ಹೋಗಿ ರಾಮಾಯಣವನ್ನು ಹಾಡಿರೆಂದೂ, ರಾಜನಾದ ರಾಮನ ಮುಂದೆ ಬಹಳ ಮರ್ಯಾದೆಯಿಂದ ನಡೆದುಕೊಳ್ಳಬೇಕೆಂದೂ ಹೇಳಿದ್ದನು.

"ಹಾಗೆಯೇ ಆಗಲಿ ತಾತಾ!" ಎಂದು ಹೇಳಿ ಕುಶಲವರು ಆಶ್ರಮದಿಂದ ಹೊರಗೆ ಹೊರಟಿದ್ದರು.

ಅವಳಿ ಜವಳಿಗಳಾದ ಕುಶಲವರಿಬ್ಬರೂ, ರಾಗ, ತಾಳ, ಲಯಬದ್ಧವಾಗಿ, ತಿಳಿಯಾದ ಮಧುರವಾದ ಕಂಠಸ್ವರಗಳಿಂದ ರಾಮಾಯಣವನ್ನು ಅದ್ಭುತವಾಗಿ ಗಾನ ಮಾಡುವ ಸಂಗತಿ ರಾಮನಿಗೂ ಗೊತ್ತಾಯಿತು. ರಾಮನು ಅವರನ್ನು ದೊಡ್ಡ ಸಭಾ ಸದಸ್ಯರ ಮುಂದೆ ಕರೆಯಿಸಿ, ಗಾನ ಮಾಡುವಂತೆ ಆಜ್ಞೆ ಮಾಡಿದನು.

ಆ ಮಹಾ ಸಭಾ ಸದಸ್ಯರಲ್ಲಿ ಮುನಿಗಳೂ, ರಾಜರೂ, ಪಂಡಿತರೂ ಪೌರಾಣಿಕರೂ. ಸಂಗೀತ ವಿದ್ವಾಂಸರೂ, ಕಲಾಕಾರರೂ, ನಾಟ್ಯ ತಿಳಿದವರೂ, ಹರಿಕಥಾ ಪ್ರವೀಣರೂ ಇದ್ದರು. ಇನ್ನೂ ಎಷ್ಟೋ ಮಹಾ ಪುರುಷರೂ ಇದ್ದರು.

## ೧೩. ಕುಶಲವರ ಪಟ್ಟಾಭಿಷೇಕ



ಮೊದಲನೇ ದಿನ ಕುಶಲವರು ವಾಲ್ಮೀಕಿ ವಿರಚಿತ ರಾಮಾಯಣದ ಮೊದಲಿನ ಇಪ್ಪತ್ತು ಸರ್ಗಗಳನ್ನು ಹಾಡಿದರು. ಅದನ್ನು ಕೇಳುತ್ತಿದ್ದ ರಾಮನು ಲಕ್ಷ್ಮಣನೊಂದಿಗೆ, "ಈ ಹುಡುಗರು ಬಹು ಚೆನ್ನಾಗಿ ಹಾಡುತ್ತಾರೆ. ಇವರಿಗೆ ಹದಿನೆಂಟು ಸಾವಿರ ಸುವರ್ಣಗಳನ್ನು ಕೊಡಿಸು" ಎಂದನು.

ಲಕ್ಷ್ಮಣನು ಅವರಿಗೆ ಬೇರೆ ಬೇರೆಯಾಗಿ ಸುವರ್ಣಗಳನ್ನು ಕೊಡಲು ನೋಡಿದರೆ, ಅವರು "ಈ ಸುವರ್ಣಗಳು ನಮಗೇಕೆ? ನಾವು ಅರಣ್ಯದಲ್ಲಿ ಕಂದಮೂಲ ಫಲಗಳನ್ನು ತಿಂದು ಬದುಕುವವರು" ಎಂದರು.

ಅವರ ಮಾತುಗಳನ್ನು ಕೇಳಿ ರಾಮನು ಆಶ್ಚರ್ಯಪಟ್ಟು, "ಹುಡುಗರೇ, ನೀವು ಹಾಡುವ ಈ ಹಾಡು ಇನ್ನೂ ಎಷ್ಟರವರೆಗಿದೆ? ಅದನ್ನು ರಚಿಸಿ ಬರೆದ ಕವಿಪುಂಗವರು ಯಾರು?" ಎಂದು ಆಸಕ್ತಿಯಿಂದ ಕೇಳಿದನು.

"ಇದನ್ನು ಗುರುವರ್ಯರಾದ ವಾಲ್ಮೀಕಿ-ಮಹಾಮುನಿಯವರು ಬರೆದರು. ಅವರು ಕೂಡಾ ಈ ಯಜ್ಞಕ್ಕೆ ಬಂದಿದ್ದಾರೆ. ಇದು ಇನ್ನೂ ಇದೆ. ನಿಮಗೆ ಕೇಳಬೇಕೆಂದಿದ್ದರೆ ದಿನಾ ಗಾನಮಾಡುತ್ತೇವೆ" ಎಂದರು ಸೀತೆಯ ಮಕ್ಕಳು.

ರಾಮನು ಹಾಗೆಯೇ ಹಾಡಲು ಹೇಳಿದನು. ಅದರಂತೆ ಕುಶಲವರು ದಿನಾ ನಿರ್ದಿಷ್ಟ ವೇಳೆಯಲ್ಲಿ ರಾಮನ ಮಹಾಸಭೆಗೆ ಬಂದು ರಾಮಾಯಣದ ಕೆಲವು ಸರ್ಗಗಳನ್ನು ಹಾಡತೊಡಗಿದರು. ಹೀಗೆ ಅನೇಕ ದಿನಗಳವರೆಗೆ ಅವರು ಗಾನ ಮಾಡುತ್ತಿರಲು, ಅವರಿಬ್ಬರೂ ಸೀತೆಯ ಮಗಂದಿರೆಂದು ಎಲ್ಲರಿಗೂ ತಿಳಿದುಬಿಟ್ಟಿತು.

ಕಡೆಗೆ ರಾಮನು ತನ್ನ ದೂತರನ್ನು ಕರೆದು, "ನೀವು ವಾಲ್ಮೀಕಿ ಮಹಾಮುನಿಯ ಬಳಿಗೆ ಹೋಗಿ, ಸೀತೆ ಪವಿತ್ರಳಾಗಿರುವ ಪಕ್ಷದಲ್ಲಿ ಅವಳು ಇಲ್ಲಿಗೆ ಬಂದು ಆ ಸಂಗತಿಯನ್ನು ನಿರೂಪಿಸಲು ಆ ಮಹಾಮುನಿಯ ಅನುಜ್ಞೆಯನ್ನು ಕೇಳುತ್ತೇನೆಂದು ಹೇಳಿರಿ" ಎಂದು ಕಳುಹಿಸಿಕೊಟ್ಟನು.

ದೂತರು ವಾಲ್ಮೀಕಿಯ ಬಳಿಗೆ ಹೋಗಿ, ರಾಮನ ಕೋರಿಕೆಯನ್ನು ಹೇಳಿದರು. ಕೂಡಲೇ ವಾಲ್ಮೀಕಿ ಮಹಾಮುನಿ ದೂತರೊಂದಿಗೆ, "ಸೀತೆ ರಾಮನ ಇಷ್ಟದಂತೆ ಬಂದು ಶಪಥ ಮಾಡುತ್ತಾಳೆಂದು ಹೇಳಿರಿ" ಎಂದು ಹೇಳಿ ಕಳುಹಿಸಿದನು.

ದೂತರು ಬಂದು ರಾಮನೊಂದಿಗೆ ಆ ಸಂಗತಿಯನ್ನು ಹೇಳಿದರು. ರಾಮನು ಕೂಡಲೇ ಸಭಿಕರ ಮಧ್ಯದಲ್ಲಿ ಸೀತೆ ಬಂದು ತನ್ನ ಪಾವಿತ್ರ್ಯತೆಯನ್ನು ನಿರೂಪಿಸುತ್ತಾಳೆಂದು ಪ್ರಕಟಪಡಿಸಿದನು. ಅದನ್ನು ಕೇಳಿ ಎಲ್ಲರೂ ಸಂತೋಷಪಟ್ಟು, ರಾಮನನ್ನು ಅಭಿನಂದಿಸಿದರು.

ಮರುದಿನ ಬೆಳಗಾದ ಕೂಡಲೇ ರಾಮನು ಯಜ್ಞವಾಟಿಕೆಗೆ ಹೋಗಿ ಮಹಾಮುನಿಗಳೆಲ್ಲರೂ




ಸಭೆಗೆ ಬರಬೇಕೆಂದು ಹೇಳಿದನು. ಹಾಗೆಯೇ ವಿಭೀಷಣಾದಿ ರಾಕ್ಷಸರನ್ನೂ, ವಾನರರನ್ನೂ, ನಾನಾ ದೇಶಗಳಿಂದ ಬಂದ ನಾಲ್ಕು ವರ್ಣಗಳವರನ್ನೂ ಮಹಾಸಭೆಗೆ ಬರಬೇಕೆಂದು ಸುದ್ದಿ ಕಳುಹಿಸಿದನು.

ಹಾಗೆಯೇ ಎಲ್ಲರೂ ಬಂದು ಉಚಿತಾಸನಗಳಲ್ಲಿ ಕುಳಿತುಕೊಂಡರು. ಆಗ ವಾಲ್ಮೀಕಿ ಮಹಾಮುನಿಯ ಹಿಂದೆ, ಅತಿ ದೀನಳಾಗಿ ತಲೆತಗ್ಗಿಸಿ ಶೋಕವೇ ಮೂರ್ತಿಮಂತವಾದಂತೆ ನಡೆದು ಬಂದ ಸೀತೆಯನ್ನು ನೋಡಿದ ಕೂಡಲೇ ಎಲ್ಲರ ಗುಂಡಿಗೆಗಳೂ ಕರಗಿ ನೀರಾಗಿ ಹೋದುವು.

ವಾಲ್ಮೀಕಿ ರಾಮನೊಂದಿಗೆ, "ರಾಮಾ, ಈ ಸೀತೆ ಮಹಾ ಶೀಲವತಿಯಾದ ಗೃಹಲಕ್ಷ್ಮಿ. ಧರ್ಮ ಮಾರ್ಗ ತಪ್ಪದವಳು. ನೀನು ಲೋಕಾಪವಾದಕ್ಕೆ ಹೆದರಿ ಇವಳನ್ನು ನನ್ನ ಆಶ್ರಮದ ಹತ್ತಿರ ಬಿಟ್ಟು ಹೋಗಿರುವಿ. ಆದ್ದರಿಂದ ನಿನಗೆ ಅವಳಲ್ಲಿ ವಿಶ್ವಾಸವು ಬಲಪಡುವ ಹಾಗೆ ಶಪಥ ಮಾಡುತ್ತಾಳೆ. ಈ ಕುಶಲವರೆಂಬ ಬಾಲಕರಿಬ್ಬರೂ ಸೀತೆಯ ಮಕ್ಕಳು. ನಾನು ಈವರೆಗೂ ಸುಳ್ಳಾಡಿದವನಲ್ಲ. ಇವರಿಬ್ಬರೂ ನಿನ್ನ ಮಗಂದಿರು. ನಾನು ಯಾವಾಗಲೂ ತಪಸ್ಸಿನಲ್ಲಿರುವವನು. ನನಗೆ ಜ್ಞಾನದೃಷ್ಟಿ ಬಂದಿದೆ. ಈ ಸೀತೆ ನಿಜಕ್ಕೂ ತಪ್ಪಿ ನಡೆದವಳಾಗಿದ್ದರೆ ನನ್ನ ತಪಸ್ಸಿನ ಫಲಿತವು ನಾಶವಾಗಿ ಹೋಗಲಿ! ನೀನು ಲೋಕಾಪವಾದಕ್ಕೆ ಹೆದರಿದೆಯೇ ಹೊರತು ಅವಳಲ್ಲಿ ಯಾವ ದೋಷವೂ ಇಲ್ಲವೆಂದು ನಿನಗೂ ಗೊತ್ತಿದೆ. ಅದೆಲ್ಲಾ ನನಗೂ ಗೊತ್ತಿದೆ" ಎಂದನು.

ರಾಮನು ವಾಲ್ಮೀಕಿಗೆ ನಮಸ್ಕಾರ ಮಾಡಿ, "ಮುನೀಶ್ವರಾ, ನೀವು ಹೇಳಿದುದೆಲ್ಲವೂ ನಿಜವೇ. ಲಂಕೆಯಲ್ಲಿ ಅಗ್ನಿದೇವನು ಸೀತೆಯ ಪಾವಿತ್ರ್ಯಕ್ಕೆ ಸಾಕ್ಷಿ ಹೇಳಿದ್ದಾನೆ. ಆದುದರಿಂದಲೇ ನಾನು ಇವಳನ್ನು ಮನೆಗೆ ಕರೆದುಕೊಂಡು ಬಂದೆನು. ಈ ಮಕ್ಕಳು ನನ್ನ ಮಕ್ಕಳೆಂದು ಕೂಡಾ ನನಗೆ ಗೊತ್ತಿದೆ. ಈಗ ಈ ಮಹಾಸಭೆಯಲ್ಲಿ ಸೀತೆ ತನ್ನ ನಿರ್ದೋಷತ್ವವನ್ನು ನಿರೂಪಿಸುವುದಾದರೆ ನಾನು ಇವಳನ್ನು ಸಂತೋಷದಿಂದ ಸ್ವೀಕರಿಸಿಕೊಳ್ಳುತ್ತೇನೆ" ಎಂದನು. ಹೀಗೆ ಹೇಳುವಾಗ ರಾಮನ ಕಂಠಸ್ವರವು ಖಂಡಿತಾಭಿಪ್ರಾಯದಂತೆ ಗಂಭೀರವಾಗಿ ಧ್ವನಿಸಿತು. ಎಲ್ಲರೂ ಉಸಿರು ಕೂಡಾ ಬಿಡದೆ ಮೂಕರಾದಂತೆ ಕೇಳುತ್ತಿದ್ದರು.

ಆಗ ಕಾಷಾಯ ವಸ್ತ್ರಗಳನ್ನು ಧರಿಸಿಕೊಂಡಿದ್ದ ಸೀತೆ, ಕೈಜೋಡಿಸಿ ನೆಲವನ್ನು ನೋಡುತ್ತಾ, "ಓ ಭೂಮಾತಾ! ನನ್ನ ಮನಸ್ಸಿನಲ್ಲಿ ರಾಮನಲ್ಲದೆ ಬೇರೆ ಯಾರ ಸ್ಮರಣೆಯೂ ಇಲ್ಲವೆಂಬುದು ನಿಜವಾದ ಪಕ್ಷದಲ್ಲಿ ಈಗಲೇ ನನಗೆ ಒಳ್ಳೆಯ ದಾರಿ ತೋರಿಸಮ್ಮಾ! ಮನೋವಾಕ್ಕಾಯಗಳಿಂದ ನಾನು ರಾಮನನ್ನು ಪೂಜಿಸುವವಳಾಗಿದ್ದರೆ ಭೂದೇವಿ ನನಗೆ ದಾರಿ ಮಾಡಿಕೊಡಲಿ! ರಾಮನ ಹೊರತು ಬೇರೇನೂ ನನಗೆ ತಿಳಿಯದೆಂಬುದು ನಿಜವಾದರೆ



ಭೂಮಾತೆಯೇ ನನಗೆ ದಾರಿಕೊಡಲಿ! ಓ! ಭೂಮಾತೆಯೇ! ಅಮ್ಮಾ! ದಯಮಾಡು?" ಎಂದು ಅಸ್ಖಲಿತವಾಣಿಯಿಂದ ಪ್ರಾರ್ಥಿಸಿಕೊಂಡಳು.

ಸೀತೆ ಹೀಗೆ ಹೇಳುತ್ತಿರುವಾಗಲೇ ಬಲವಂತರಾದ ನಾಗಕುಮಾರರು ದಿವ್ಯವಾದೊಂದು ಸಿಂಹಾಸನವನ್ನು ಹೊತ್ತುಕೊಂಡು ಭೂಮಿಯೊಳಗಿನಿಂದ ಮೇಲೆದ್ದು ಬಂದರು. ಸಿಂಹಾಸನವು ಅತ್ಯದ್ಭುತವಾಗಿತ್ತು. ನಾಗಕುಮಾರರ ತಲೆಯ ರತ್ನಗಳು ವಿಚಿತ್ರಕಾಂತಿಯಿಂದ ಹೊಳೆಯುತ್ತಿದ್ದುವು. ಆ ಸಿಂಹಾಸನದಲ್ಲಿ ಆಸೀನಳಾಗಿದ್ದ ಭೂದೇವಿ ಆಪ್ಯಾಯತೆಯಿಂದ ತನ್ನ ಎರಡು ಕೈಗಳನ್ನೂ ಚಾಚಿ ಸೀತೆಯನ್ನು ಎತ್ತಿ ಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡಳು. ಕೂಡಲೇ ಸಿಂಹಾಸನವು ಪಾತಾಳದ ಕಡೆಗೆ ಇಳಿದು ಹೋಯಿತು. ಭೂಮಿ ಎಂದಿನಂತೆ ಸೇರಿಕೊಂಡಿತು.

ಈ ದೃಶ್ಯವನ್ನು ನೋಡಿ ಎಲ್ಲರೂ ನಿಶ್ಚೇಷ್ಟಿತರಾಗಿ ಹೋದರು. ಸ್ವಲ್ಪ ಹೊತ್ತು ಒಂದೇ ನಿಃಶಬ್ದತೆ. ಕೆಲವರ ಕಣ್ಣುಗಳು ಸೀತೆಯನ್ನು ನೋಡುತ್ತಾ ಹಾಗೆಯೇ ಸ್ತಬ್ಧವಾದುವು. ಕೆಲವರ ಕಣ್ಣುಗಳು ರಾಮನ ಮೇಲೆಯೇ ನೆಟ್ಟುಹೋಗಿ ಸ್ತಬ್ಧವಾಗಿದ್ದುವು.

ಆಮೇಲೆ ಒಮ್ಮೆಗೇ ಕಲಕಲರವವೆದ್ದಿತು. ವಾನರರು ಗಳಗಳನೇ ಅಳಲಿಕ್ಕೆ ತೊಡಗಿದರು. "ಎಂತಹ ಮಹಾ ಸಾಧ್ವಿಯೋ!" ಎಂದು ಮುನಿಗಳು ಮೆಚ್ಚಿಕೊಂಡರು.

ರಾಮನು ಕೈ ಕೋಲಿನ ಮೇಲೆ ಭಾರಹಾಕಿ ಎದ್ದು ನಿಂತು, ಸ್ವಲ್ಪ ಹೊತ್ತು ಕಣ್ಣೀರು ಸುರಿಸಿ, "ನಾನು ಇಷ್ಟೊಂದು ಕಷ್ಟವನ್ನು ಈವರೆಗೂ ಅನುಭವಿಸಲಿಲ್ಲ. ಹೇ ಭೂದೇವೀ! ನನ್ನ ಸೀತೆಯನ್ನು ನನಗೆ ಕೊಟ್ಟುಬಿಡು; ಇಲ್ಲವೇ, ನನಗೆ ಕೂಡಾ ದಾರಿ ಮಾಡಿಕೊಡು! ಯಾರಲ್ಲಿ? ನನ್ನ ಧನುರ್ಬಾಣಗಳನ್ನು ತನ್ನಿರಿ. ಈ ಭೂಮಿಯನ್ನು ಭೇದಿಸಿಬಿಡುತ್ತೇನೆ. ನಾನೇ ದಾರಿ ಮಾಡಿಕೊಳ್ಳುತ್ತೇನೆ" ಎಂದನು ಆವೇಶದಿಂದ.

ಎಲ್ಲರೂ ಎದ್ದು ನಿಂತು ಬಗೆಬಗೆಯಾಗಿ ರಾಮನಿಗೆ ಸಮಾಧಾನ ಹೇಳಿದರು.

ವಾಲ್ಮೀಕಿ ಕುಶಲವರನ್ನು ಕರೆದುಕೊಂಡು ಪರ್ಣಶಾಲೆಯ ಕಡೆಗೆ ಹೋದನು. ಆ ರಾತ್ರಿ ಪೂರಾ ಅವರಿಗೆ ಸೀತಾ ಸ್ಮರಣೆಯಲ್ಲಿಯೇ ತುಂಬಿಹೋಯಿತು. ಬೆಳಗಾಯಿತು.

ಮತ್ತೆ ನಿರ್ದಿಷ್ಟ ಕಾಲದಲ್ಲಿ ಮಹಾಸಭೆ ನೆರೆಯಿತು. ಕುಶಲವರು ಆ ಸಭೆಗೆ ಹೋಗಿ ಉತ್ತರ ರಾಮಾಯಣವನ್ನು ಗಾನ ಮಾಡಿದರು. ಅದರೊಂದಿಗೇ ಯಜ್ಞಕಾಂಡವೂ ಮುಗಿಯಿತು. ಯಜ್ಞಕ್ಕೆ ಬಂದವರೆಲ್ಲರನ್ನೂ ತಕ್ಕ ರೀತಿಯಲ್ಲಿ ರಾಮನು ಸನ್ಮಾನಿಸಿದನು. ಅದೆಲ್ಲಾ ಮುಗಿದ ಮೇಲೆ ರಾಮನು ಯಜ್ಞ ಪ್ರದೇಶದಿಂದ ಅಯೋಧ್ಯೆಗೆ ಹಿಂದಿರುಗುವಾಗ ವಾಲ್ಮೀಕಿ ಮುನಿಯು ಅನುಮತಿ

ಪಡೆದು ಕುಶಲವರನ್ನು ಕೂಡಾ ತನ್ನೊಂದಿಗೇ ಕರೆದುಕೊಂಡನು. ಆಮೇಲೆ ಲವಕುಶರು ವಾಲ್ಮೀಕಿಯ ಆಶ್ರಮಕ್ಕೆ ಹೋಗಲಿಲ್ಲ. ರಾಮ ಕುಮಾರರಾಗಿ ಅಲ್ಲಿಯೇ ಇದ್ದರು.

ರಾಮನು ಬಂಗಾರದ ಸೀತಾ ವಿಗ್ರಹವನ್ನು ಪಕ್ಕದಲ್ಲಿಟ್ಟುಕೊಂಡು ಅನೇಕ ಅಶ್ವಮೇಧ, ವಾಜಪೇಯ ಮೊದಲಾದ ದೊಡ್ಡ ದೊಡ್ಡ ಯಜ್ಞಗಳನ್ನು ಮಾಡಿದನು. ಅವನು ಧರ್ಮವನ್ನು ಸರಿಯಾಗಿ ನಿಲ್ಲಿಸಲು ಪ್ರಯತ್ನಿಸುತ್ತ, ನ್ಯಾಯ ಪರಿಪಾಲನೆ ಮಾಡುತ್ತ, ಪ್ರಜೆಗಳಿಂದ ಅಪಾರ ಆದರಣೆಯನ್ನು ಗಳಿಸಿದನು. ಅವನ ಪಾಲನೆಯಲ್ಲಿ ದೇಶವು ಪರಮ ಸುಭಿಕ್ಷವಾಗಿದ್ದಿತು. ಅಕಾಲ ಮರಣಗಳೂ, ಈತಿಬಾಧೆಗಳೂ ಇರಲಿಲ್ಲ. ರಾಮರಾಜ್ಯವೆಂಬ ಆದರ್ಶತೆಯ ಕೀರ್ತಿಯನ್ನು ಗಳಿಸಿತು.

ಕಾಲಕ್ರಮದಲ್ಲಿ ಕೌಸಲ್ಯೆಯೂ, ಸುಮಿತ್ರೆಯೂ, ಕೈಕೇಯಿಯೂ ತೀರಿಹೋದರು. ಅವರಿಗೆ ರಾಮನು ಉತ್ತರ ಕ್ರಿಯೆಗಳನ್ನು ಮಾಡಿದನು. ಹೇರಳವಾಗಿ ದಾನಧರ್ಮಗಳನ್ನೂ ನಡೆಸಿದನು.

ಮತ್ತೆ ಸ್ವಲ್ಪ ಕಾಲ ಕಳೆದ ಮೇಲೆ ಕೈಕೇಯಿಯ ಅಣ್ಣನಾದ ಯುಧಾಜಿತ್ತುವಿನ ಬಳಿಯಿಂದ ಗಾರ್ಗ್ಯನು ಹತ್ತು ಸಾವಿರ ಕುದುರೆಗಳ ಕಾಣಿಕೆಯೊಂದಿಗೆ ರಾಮನ ಬಳಿಗೆ ಬಂದು, "ರಾಮಾ, ನಿನ್ನ ಮಾವಯ್ಯ ನಿನ್ನೊಂದಿಗೆ ಹೀಗೆ ಹೇಳುತ್ತಾರೆ. ಸಿಂಧು ನದಿಯ ಎರಡು ಪಕ್ಕಗಳಲ್ಲಿರುವ ಗಂಧರ್ವ ದೇಶವು ಅತ್ಯಂತ ಶೋಭಾಯಮಾನವಾದುದು. ಅಲ್ಲಿ ಶೈಲೂಷನ ಸಂತತಿಗೆ ಸೇರಿದ ಮೂರು ಕೋಟಿ ಮಂದಿ ಗಂಧರ್ವರು ಮಹಾ ಬಲವಂತರು. ಅವರನ್ನು ಜಯಿಸಿ, ಗಂಧರ್ವ ದೇಶವನ್ನು ವಶಪಡಿಸಿಕೊಳ್ಳಬೇಕು. ನಿನ್ನ ಹಿತಕ್ಕಾಗಿಯೇ ಈ ಮಾತು ಹೇಳುತ್ತೇನೆ" ಎಂದು ಯುಧಾಜಿತ್ತುವಿನ ಸಂದೇಶವನ್ನು ತಿಳಿಸಿದನು.




ಅದನ್ನು ಕೇಳಿಕೊಂಡ ರಾಮನು, "ಒಳ್ಳೆಯದು. ಈ ಕಾರ್ಯಕ್ಕೆ ಸಾಕಷ್ಟು ಸೇನೆಯೊಂದಿಗೆ ಭರತನನ್ನು ಕಳುಹಿಸುತ್ತೇನೆ. ಅವನ ಪುತ್ರರಾದ ತಕ್ಷನೂ, ಪುಷ್ಕಲನೂ ಅವನ ಜತೆಯಲ್ಲಿ ಹೋಗಲಿ. ಭರತನು ಗಂಧರ್ವ ದೇಶವನ್ನು ಜಯಿಸಿ, ಅದನ್ನು ಎರಡು ವಿಭಾಗ ಮಾಡಿ, ತನ್ನ ಇಬ್ಬರು ಕುಮಾರರನ್ನು ಅವುಗಳಿಗೆ ರಾಜರಾಗಿ ಪಾಲಿಸುವಂತೆ ನಿಯಮಿಸಿ ಹಿಂದಿರುಗಿ ಬರಲಿ" ಎಂದನು.

ಆ ಪ್ರಕಾರವಾಗಿ ಭರತನು ತನ್ನೊಂದಿಗೆ ದೊಡ್ಡ ಸೇನೆಯನ್ನು ಸಾಗಿಸಿಕೊಂಡು ಹದಿನೈದು ದಿನ ಪ್ರಯಾಣ ಮಾಡಿ ಕೇಕಯ ದೇಶವನ್ನು ಸೇರಿ ಯುಧಾಜಿತ್ತುವನ್ನು ಕಲೆತುಕೊಂಡನು. ಆಮೇಲೆ ಇಬ್ಬರೂ ಕೂಡಿ ಗಂಧರ್ವರ ಮೇಲೆ ಯುದ್ಧಕ್ಕೆ ಹೋದರು. ಆ ಯುದ್ಧದಲ್ಲಿ ಗಂಧರ್ವರು ನಾಶವಾದರು. ಹೀಗೆ ಜಯಿಸಿದ ದೇಶವನ್ನು ಭರತನು ಎರಡಾಗಿ ವಿಭಾಗಿಸಿ ಒಂದಕ್ಕೆ ತಕ್ಷಶಿಲಾ ಎಂದು



ಭರತನೂ ಹೊರಟರು. ಅವರಿಬ್ಬರೂ ಆಯಾ ದೇಶಗಳಲ್ಲಿ ಅವರಿಬ್ಬರಿಗೂ ರಾಜ್ಯಗಳ ಏರ್ಪಾಟು ಮಾಡಿ ಕೊಟ್ಟು ಅಯೋಧ್ಯೆಗೆ ಹಿಂತಿರುಗಿದರು.

ಕಾಲವು ಕಳೆಯಿತು. ಒಂದು ದಿನ ಯಮನು ಮುನಿ ವೇಷದಲ್ಲಿ ರಾಮನ ರಾಜಭವನಕ್ಕೆ ಬಂದು ಲಕ್ಷ್ಮಣನನ್ನು ನೋಡಿ, "ಲಕ್ಷ್ಮಣಾ, ನೀನು ಈಗಲೇ ಹೋಗಿ ಒಬ್ಬ ದೊಡ್ಡ ಮುನಿಯ ದೂತನಾಗಿ ಬಂದಿರುವ ನನ್ನನ್ನು ಒಳಗೆ ಬರಲು ಅನುಮತಿ ಕೇಳಿ ಬಾ" ಎಂದನು.

ಲಕ್ಷ್ಮಣನು ಕೂಡಲೇ ಹೋಗಿ ಆ ಮಾತು ಹೇಳಿದ ಕೂಡಲೇ ರಾಮನು ಅವನನ್ನು ಕಳುಹಿಸುವಂತೆ ಲಕ್ಷ್ಮಣನಿಗೆ ಹೇಳಿದನು.

ಯಮನು ಬಂದು ರಾಮನ ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸಿ, "ರಾಮಾ, ನಾವು ಏಕಾಂತದಲ್ಲಿ ಮಾತಾಡಬೇಕಾಗಿದೆ. ನಾವು ಮಾತಾಡುವಾಗ ಯಾರಾದರೂ ಬಂದ ಪಕ್ಷದಲ್ಲಿ ನೀನು ಅವರಿಗೆ ಮರಣಶಿಕ್ಷೆ ವಿಧಿಸಬೇಕು. ಅದಕ್ಕೆ ಒಪ್ಪಿಕೊಳ್ಳುವುದಾದರೆ ನಾನು ಬಂದ ಕೆಲಸ ಹೇಳುತ್ತೇನೆ" ಎಂದನು.

ರಾಮನು ಅದಕ್ಕೆ ಒಪ್ಪಿ, ಲಕ್ಷ್ಮಣನನ್ನು ಕರೆದು, "ಲಕ್ಷ್ಮಣಾ, ದ್ವಾರಪಾಲಕನನ್ನು ಹೋಗಲು ಹೇಳಿ ನೀನೇ ದ್ವಾರದಲ್ಲಿ ನಿಂತಿರು. ನಾವು ಮಾತಾಡುವಾಗ ಯಾರು ಒಳಗೆ ಬಂದರೂ ಮರಣದಂಡನೆ ತಪ್ಪದು. ಜಾಗ್ರತೆ!" ಎಂದನು.

ಲಕ್ಷ್ಮಣನು ಹೋದ ಮೇಲೆ ಯಮನು ರಾಮನೊಂದಿಗೆ, "ರಾಮಾ, ನಾನು ಮಾರುವೇಷದಲ್ಲಿ ಬಂದ ಯಮನು. ಬ್ರಹ್ಮನು ನನ್ನನ್ನು ಕಳುಹಿಸಿದ್ದಾನೆ. ಬ್ರಹ್ಮನು ನಿನ್ನೊಂದಿಗೆ ಹೀಗೆ ಹೇಳಲು ಹೇಳಿದ್ದಾನೆ. ನೀನು ರಾವಣಾದಿ ರಾಕ್ಷಸರನ್ನು ಸಂಹರಿಸಲು ಅವತಾರವೆತ್ತಿದ ವಿಷ್ಣುಮೂರ್ತಿ. ನೀನು ಭೂಲೋಕಕ್ಕೆ ಬಂದ ಕೆಲಸವು ಮುಗಿಯಿತು. ನಿನಗೆ

ಹೆಸರಿಟ್ಟು ತಕ್ಷನನ್ನು ಅದರ ಪರಿಪಾಲಕನನ್ನಾಗಿ ನಿಯಮಿಸಿದನು. ಮತ್ತೊಂದು ಭಾಗಕ್ಕೆ ಪುಷ್ಕಲಾವತಿ ಎಂದು ಹೆಸರಿಟ್ಟು ಪುಷ್ಕಲನ ಅಧಿಕಾರಕ್ಕೆ ಕೊಟ್ಟನು. ಭರತನು ಆ ಎರಡು ನಗರಗಳಲ್ಲಿ ಐದು ವರ್ಷಗಳವರೆಗೆ ಇದ್ದು, ಆಮೇಲೆ ಅಯೋಧ್ಯೆಗೆ ಹಿಂದಿರುಗಿದನು.

ಇನ್ನು ಲಕ್ಷ್ಮಣನ ಮಗಂದಿರಾದ ಅಂಗದನಿಗೂ, ಚಂದ್ರಕೇತುವಿಗೂ ರಾಜ್ಯಗಳಾಗಬೇಕಿದ್ದಿತು. ಅವರಿಗೆ ಆಳತಕ್ಕಂತಹ ದೇಶಗಳು ಯಾವುದಾದರೂ ಇದ್ದರೆ ನೋಡುವಂತೆ ರಾಮನು ಲಕ್ಷ್ಮಣನಿಗೆ ಹೇಳಿದನು.

ಕಾರುಪಥವೆಂಬ ದೇಶವು ಅವರಿಗೆ ಸರಿಯಾಗಿದೆ ಎಂದು ಲಕ್ಷ್ಮಣನು ಹೇಳಿದನು. ಅದನ್ನು ಅಂಗದನಿಗೂ, ಚಂದ್ರಕಾಂತವೆಂಬ ದೇಶವನ್ನು ಚಂದ್ರಕೇತುವಿಗೂ ಏರ್ಪಡಿಸಿಕೊಟ್ಟರೆ ಚೆನ್ನಾಗಿರುವುದೆಂದು ರಾಮಲಕ್ಷ್ಮಣರೊಳಗೆ ನಿರ್ಣಯವಾಯಿತು. ಅಂಗದನೊಂದಿಗೆ ಲಕ್ಷ್ಮಣನೂ, ಚಂದ್ರಕಾಂತನೊಂದಿಗೆ

ಯಾವಾಗ ತಿರುಗಿ ಬರಬೇಕೆಂದಿದೆಯೋ, ಆವಾಗ ತಿರುಗಿ ಬರಬಹುದು. ನೆನಪು ಮಾಡುವುದು ನಮ್ಮ ಕರ್ತವ್ಯ" ಎಂದನು.

ರಾಮನು ನಕ್ಕು, "ಯಮಧರ್ಮಾ, ನಿನ್ನ ಬರುವಿಕೆ ನನಗೆ ಬಹಳ ಸಂತೋಷವಾಗಿದೆ. ನಾನು ಕೂಡಾ ಎಲ್ಲಿಂದ ಬಂದೆನೋ ಅಲ್ಲಿಗೆ ಬರಲು ಸಿದ್ಧ ನಾಗಿದ್ದೇನೆ" ಎಂದನು.

ಹೀಗೆ ಒಳಗೆ ರಾಮನೂ ಯಮನೂ ಮಾತಾಡಿ ಕೊಂಡಿರುವಾಗ, ಹೊರಗೆ ದುರ್ವಾಸನು ಬಂದು, "ಲಕ್ಷ್ಮಣಾ, ಈಗಲೇ ನಾನು ರಾಮನನ್ನು ನೋಡ ಬೇಕು" ಎಂದನು.

"ಸ್ವಾಮಿ, ನಮ್ಮ ಅಣ್ಣನು ಇನ್ನೊಂದು ಕೆಲಸ ದಲ್ಲಿ ನಿಮಗ್ನನಾಗಿದ್ದಾನೆ. ದಯವಿಟ್ಟು ಸ್ವಲ್ಪ ಹೊತ್ತು ಕಾಯಬೇಕು. ನೀವು ಏನು ಕೆಲಸದ ಮೇಲೆ ಬಂದಿರೋ, ನನ್ನಿಂದಾಗುವುದಾದರೆ ಮಾಡುತ್ತೇನೆ, ಹೇಳಿರಿ" ಎಂದನು ಲಕ್ಷ್ಮಣ.

ದುರ್ವಾಸನು ಕೋಪೋಗ್ರನಾಗಿ "ಈಗಲೇ ನನ್ನನ್ನು ರಾಮನ ಬಳಿಗೆ ಕರೆದೊಯ್ಯದಿದ್ದರೆ ನಿಮ್ಮ ವಂಶವೆಲ್ಲಾ ನಿರ್ಮೂಲವಾಗುವ ಹಾಗೆ ಶಾಪ ಕೊಡುತ್ತೇನೆ" ಎಂದನು.

ಅದನ್ನು ಕೇಳಿ ಲಕ್ಷ್ಮಣನು ತಾನೊಬ್ಬನು ಸತ್ತರೆ ಚಿಂತೆಯಿಲ್ಲವೆಂದೂ, ಸರ್ವ ನಾಶವಾಗಲು ಬಿಡಬಾರ ದೆಂದೂ ಆಲೋಚಿಸಿ, ಲಕ್ಷ್ಮಣನು ಒಳಗೆ ಹೋಗಿ ರಾಮನನ್ನು ಕರೆದನು,

ರಾಮನು ಎದ್ದು ಬಂದು ದುರ್ವಾಸನಿಗೆ ನಮಸ್ಕಾರ ಮಾಡಿ, "ಸ್ವಾಮಿ, ಏನಾಜ್ಞೆ?" ಎಂದು ಕೇಳಿದನು.

"ನನಗೆ ಈಗಲೇ ಭೋಜನವಿಡಿಸು" ಎಂದನು ದುರ್ವಾಸ ಮುನಿ.

ರಾಮನು ಕೂಡಲೇ ಅವನಿಗೆ ಭೋಜನದ ಏರ್ಪಾಡು ಮಾಡಿಸಿದನು. ದುರ್ವಾಸನು ಭೋಜನ




ಮಾಡಿ ತೃಪ್ತನಾಗಿ ಹೊರಟು ಹೋದನು. ಆಗ ರಾಮನಿಗೆ ತನ್ನ ಶಪಥವು ನೆನಪಿಗೆ ಬಂತು. ಅವನು ಚಿಂತಿಸುತ್ತಿರಲು, ಲಕ್ಷ್ಮಣನು ಅಣ್ಣನ ಬಳಿಗೆ ಬಂದು, "ಅಣ್ಣಾ, ನನಗಾಗಿ ಚಿಂತಿಸಬಾರದು. ನನಗೆ ಮರಣದಂಡನೆ ಕೊಟ್ಟು ನಿನ್ನ ಮಾತನ್ನು ಉಳಿಸಿಕೋ" ಎಂದನು.

ರಾಮನು ಮಂತ್ರಿ ಪುರೋಹಿತರನ್ನು ಕರೆಯಿಸಿ, ಅವರೊಂದಿಗೆ ನಡೆದುದನ್ನೆಲ್ಲಾ ಹೇಳಿ ಅವರ ಆಲೋಚನೆ ಕೇಳಿದನು.

"ರಾಮಾ, ಲಕ್ಷ್ಮಣನನ್ನು ಬಿಟ್ಟುಬಿಡು. ತ್ಯಾಗವು ವಧೆಗೆ ಸಮಾನವು. ಇದರಿಂದ ಧರ್ಮಕ್ಕೆ ಯಾವ ಭಂಗವೂ ಬಾರದು" ಎಂದು ವಸಿಷ್ಠನು ಹೇಳಿದನು.

ಲಕ್ಷ್ಮಣನು ರಾಮನಿಗೆ ನಮಸ್ಕಾರ ಮಾಡಿ, ತನ್ನ ಮನೆಗೆ ಕೂಡಾ ಹೋಗದೆ, ನೆಟ್ಟಗೆ ಸರಯೂ ನದೀ ತೀರಕ್ಕೆ ಹೋಗಿ ಶ್ವಾಸಬಂಧನ ಮಾಡಿ ಯೋಗ ಮಾರ್ಗವನ್ನು ಹಿಡಿದನು. ಆಗ ಇಂದ್ರನು

ಅದೃಶ್ಯ ರೂಪದಲ್ಲಿ ವಿಮಾನದಲ್ಲಿ ಬಂದು ಲಕ್ಷ್ಮಣನನ್ನು ಶರೀರದೊಂದಿಗೆ ಸ್ವರ್ಗಕ್ಕೆ ಕರೆದುಕೊಂಡು ಹೋದನು. ಹೀಗೆ ವಿಷ್ಣುವಿನ ನಾಲ್ಕನೇ ಭಾಗವು ಸ್ವಸ್ಥಾನಕ್ಕೆ ಹಿಂದಿರುಗಿತು.

ತರುವಾಯ ರಾಮನು ಸಭೆ ಸೇರಿಸಿ, "ಲಕ್ಷ್ಮಣನ ಹಾಗೆಯೇ ನಾನು ಕೂಡಾ ಇನ್ನು ಹೊರಟು ಹೋಗುತ್ತೇನೆ. ಭರತನಿಗೆ ಪಟ್ಟಾಭಿಷೇಕ ಮಾಡುವ ಏರ್ಪಾಡು ಮಾಡಿರಿ" ಎಂದನು.

ಆ ಮಾತು ಕೇಳಿ ಭರತನಿಗೆ ಬುದ್ಧಿ ಭ್ರಂಶವಾದಂತಾಯಿತು, "ಅಣ್ಣಾ, ನೀನು ಪಾಲಿಸಿದ ರಾಜ್ಯವನ್ನು ನಾನು ಪಾಲಿಸುವುದೇ ? ನನ್ನಿಂದಾಗದು. ಕುಶಲವರಿಗೆ ಪಟ್ಟಾಭಿಷೇಕ ಮಾಡಿಸು. ಕೋಸಲ ದೇಶಕ್ಕೆ ಕುಶನನ್ನೂ, ಉತ್ತರ ಕೋಸಲಕ್ಕೆ ಲವನನ್ನೂ ಪಾಲಕರನ್ನಾಗಿ ನಿಯಮಿಸಿ ಪಟ್ಟಗಟ್ಟುವುದೇ ಸರಿಯಾದುದು. ನಾವು ಸ್ವರ್ಗಕ್ಕೆ ಹೋಗಲಿರುವ ಸಂಗತಿಯನ್ನು ಶತ್ರುಘ್ನನಿಗೆ ತಿಳಿಸಬೇಕು" ಎಂದು ವಿನಂತಿಸಿಕೊಂಡನು ಭರತ.

ಭರತನು ಹೇಳಿದ ಪ್ರಕಾರವೇ ಮಾಡಲು ರಾಮನು ಅಂಗೀಕರಿಸಿದನು. ಅದರಂತೆ ಕುಶಲವರಿಗೆ ಪಟ್ಟಾಭಿಷೇಕವಾಯಿತು.

ಶತ್ರುಘ್ನನನ್ನು ಕರೆದುಕೊಂಡು ಬರಲು ಒಬ್ಬ ದೂತನು ಮಧುರಾಪುರಕ್ಕೆ ಹೋದನು. ಶತ್ರುಘ್ನನು ತನ್ನ ರಾಜ್ಯವನ್ನು ಕೂಡಾ ತನ್ನ ಮಗಂದಿರಾದ ಸುಬಾಹುವಿಗೂ, ಶತ್ರುಘಾತಿಗೂ ಹಂಚಿಕೊಟ್ಟು ಅಯೋಧ್ಯೆಗೆ ಹೊರಟು ಬಂದನು.

ರಾಮನು ಸ್ವರ್ಗಕ್ಕೆ ಹೋಗುವನೆಂಬ ವಾರ್ತೆಯನ್ನು ಕೇಳಿ ಸುಗ್ರೀವನೂ, ವಿಭೀಷಣನೂ ತಮ್ಮ ತಮ್ಮ ಪರಿವಾರದೊಂದಿಗೆ ಅಯೋಧ್ಯೆಗೆ ಬಂದರು. ಸುಗ್ರೀವನು ಅಂಗದನಿಗೆ ಪಟ್ಟಾಭಿಷೇಕ ಮಾಡಿಯೇ ಬಂದಿದ್ದನು.

ಹೀಗೆ ರಾಮನ ಪ್ರಸ್ಥಾನವು ಪ್ರಾರಂಭವಾಯಿತು. ರಾಮನು ತೆಳ್ಳಗಿನ ಬಟ್ಟೆಯನ್ನು ಉಟ್ಟು, ಕೈಯಲ್ಲಿ ದರ್ಭೆಯನ್ನು ಹಿಡಿದು ಮೌನ ಗಂಭೀರವಾಗಿ ನಡೆಯತೊಡಗಿದನು. ಅವನ ಹಿಂದೆ ಭಕ್ತಿಯಿಂದ ಅಂತಃಪುರ ಸ್ತ್ರೀಯರೂ ಭರತ ಶತ್ರುಘ್ನರೂ, ಮಂತ್ರಿಗಳೂ, ಭೃತ್ಯರೂ ವಾನರರೂ ಸಾಗಿದರು.

ಸ್ವಲ್ಪ ದೂರ ನಡೆದು ರಾಮನು ಸರಯೂ ನದಿಯನ್ನು ಪ್ರವೇಶಿಸಿದನು. ಅವನು ಆ ನದಿಯಲ್ಲಿ ಪಾದಗಳನ್ನು ಇಡುತ್ತಲೇ ಅವನಿಗೆ ಬ್ರಹ್ಮನ ಕರೆ ಕೇಳಿಸಿತು. ಆಗಲೇ ರಾಮನಿಗೂ, ಭರತ ಶತ್ರುಘ್ನರಿಗೂ ವೈಷ್ಣವ ಶರೀರಗಳು ಬಂದುವು. ವಿಷ್ಣುವನ್ನು ಬ್ರಹ್ಮನು ಸ್ವಾಗತಿಸಿಕೊಂಡನು. ಅವನೊಂದಿಗೆ ಅವತರಿಸಿದವರೆಲ್ಲರೂ ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿ ಸೇರಿಕೊಂಡರು. —(ಸಮಾಪ್ತಿ)

